# ಕೀರಿಕ್ಕಾಡು ವಿಷ್ಣು ಮಾಸ್ತರರ ಯಕ್ಷಗಾನ ಪ್ರಸಂಗಗಳು : ಒಂದು ಅಧ್ಯಯನ

ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ
ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

ಸಂಶೋಧಕಿ
ದಿವ್ಯಶ್ರೀ.ಡಿ

ಮಾರ್ಗದರ್ಶಕರು
ಡಾ. ಪಾ.ನ.ಮಯ್ಯ

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು

# ಕೀರಿಕ್ಕಾಡು ವಿಷ್ಣು ಮಾಸ್ತರರ ಯಕ್ಷಗಾನ ಪ್ರಸಂಗಗಳು : ಒಂದು ಅಧ್ಯಯನ

ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ
ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ




ಸಂಶೋಧಕಿ
ದಿವ್ಯಶ್ರೀ.ಡಿ

ಮಾರ್ಗದರ್ಶಕರು
ಡಾ. ಪಾ.ನ.ಮಯ್ಯ

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು

# ದೃಢೀಕರಣ ಪತ್ರ

'ಕೀರಿಕ್ಕಾಡು ವಿಷ್ಣು ಮಾಸ್ತರರ ಯಕ್ಷಗಾನ ಪ್ರಸಂಗಗಳು – ಒಂದು ಅಧ್ಯಯನ' ಎಂಬ ಶೀರ್ಷಿಕೆಯ ಈ ಸಂಪ್ರಬಂಧವು ದಿವ್ಯಶ್ರೀ ಡಿ. ಇವರು ಎಂ.ಫಿಲ್. ಪದವಿಯ ಆಂಶಿಕ ಅಗತ್ಯದ ಪೂರೈಕೆಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದುದಾಗಿದೆ. ಈ ಸಂಪ್ರಬಂಧವು ಸಂಶೋಧಕರು ತಮ್ಮ ಸ್ವಂತ ಸಂಶೋಧನೆಯ ಮೂಲಕ ರೂಪುಗೊಳಸಿದುದಾಗಿದೆ. ಈ ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ, ಉದ್ದೇಶಗಳಿಗಾಗಲಿ ಬಳಸಲಾಗಿಲ್ಲ ಎಂದು ದೃಢೀಕರಿಸುತ್ತೇನೆ.

ಮಂಗಳೂರು
ದಿನಾಂಕ : 5.10.08.

ಪಾ.ನ. ಮಯ್ಯ (ಡಾ. ಪಿ.ನರಸಿಂಹ ಮಯ್ಯ)
ಕನ್ನಡ ಪ್ರಾಧ್ಯಾಪಕರು
ಸ್ಕೂಲ್ ಆಫ್ ಸೋಶಿಯಲ್ ವರ್ಕ್
ರೋಶನಿ ನಿಲಯ, ಮಂಗಳೂರು –೨

# ಪ್ರಮಾಣ ಪತ್ರ

'ಕೀರಿಕ್ಕಾಡು ವಿಷ್ಣು ಮಾಸ್ತರರ ಯಕ್ಷಗಾನ ಪ್ರಸಂಗಗಳು – ಒಂದು ಅಧ್ಯಯನ' ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲೆಂದು ನಾನು ಡಾ ಪಾ.ನ. ಮಯ್ಯ, ಮುಖ್ಯಸ್ಥರು ಕನ್ನಡ ವಿಭಾಗ ರೋಶನಿ ನಿಲಯ, ಮಂಗಳೂರು ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಸಂಶೋಧನಾ ಸಂಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಯಾವುದೇ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲ ಎಂದು ಈ ಮೂಲಕ ತಿಳಿಸುತ್ತೇನೆ.

ಮೂಡುಬಿದ್ರೆ

ದಿನಾಂಕ : ೫.೯.೨೦೦೮

Divyashree D

(ದಿವ್ಯಶ್ರೀ. ಡಿ)

ಸಂಶೋಧಕಿ

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು

# ಪರಿವಿಡಿ

# ಅಧ್ಯಾಯ ಒಂದು

"ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ" ಎಂಬ ಮಾತು ಯಕ್ಷಗಾನಕ್ಕೆ ನಿಶ್ಚಯವಾಗಿ ಅನ್ವಯಿಸುತ್ತದೆ.ಯಕ್ಷಗಾನ ಕರ್ನಾಟಕದ ಸಾಂಸ್ಕೃತಿಕ ಹೆಗ್ಗುರುತೆಂದೂ, ಅನೇಕ ಕಲೆಗಳ ಸಂಗಮರಂಗವೆಂದೂ, ದೃಶ್ಯವಾಗಿಯೂ, ಶ್ರಾವ್ಯವಾಗಿಯೂ ಮನಸ್ಸನ್ನು ತಣಿಸಬಲ್ಲುದು ಎಂಬುದರಲ್ಲಿ ಎರಡು ಮಾತಿಲ್ಲ.ಆಧುನಿಕ ವಿಮರ್ಶಕರು ಕೂಡಾ ಯಕ್ಷಗಾನವನ್ನು 'ಸಮಗ್ರ ರಂಗಭೂಮಿ' ಎಂಬರ್ಥದಲ್ಲಿಯೇ ಬಳಸುತ್ತಾರೆ.

ಯಕ್ಷಗಾನ ಕಲಾಪ್ರಕಾರದ ಬಗೆಗೆ ಸಾಕಷ್ಟು ಪರಿಚಯ,ವಿಶ್ಲೇಷಣೆ, ಜಿಜ್ಞಾಸೆಗಳು ನಡೆದಿವೆ.ಆದರೆ ಈ ಕಲಾ ಪ್ರಕಾರಗಳನ್ನು ಕಟ್ಟಿ ಬೆಳೆಸಿದ ಅಪರೂಪದ ವ್ಯಕ್ತಿತ್ವಗಳ ಬಗ್ಗೆ ವಿಶೇಷ ಅಧ್ಯಯನಗಳು ನಡೆದಿಲ್ಲ.ಕಲಾಪ್ರೀತಿ ಮತ್ತು ಶ್ರದ್ಧೆಯಿಂದ ಯಕ್ಷಗಾನದ ಸರ್ವಾಂಗೀಣ ಉನ್ನತಿಗೆ ಒಂದು ಸಂಸ್ಥೆಯೋಪಾದಿಯಲ್ಲಿ ದುಡಿದ ಅನೇಕ ಸಾಧಕರು ಇದ್ದಾರೆ.ಇವರ ಕುರಿತಾದ ಅಧ್ಯಯನ ಐತಿಹಾಸಿಕ ದೃಷ್ಟಿಯಿಂದಲೂ ಬಹಳ ಮಹತ್ವದ್ದು.

ಈ ಹಿನ್ನೆಲೆಯಿಂದ ಯಕ್ಷಗಾನ ಪ್ರದರ್ಶನ ಮತ್ತು ಪ್ರಸಂಗ ರಚನೆಯ ಮೂಲಕ ಯಕ್ಷಗಾನದ ಬೆಳವಣಿಗೆಗೆ ಅನನ್ಯ ಕೊಡುಗೆ ನೀಡಿದ ಕೀರಿಕ್ಕಾಡು ವಿಷ್ಣು ಮಾಸ್ತರ್ ಅವರ ಕುರಿತ ಈ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.ಇದರಲ್ಲಿ ಅವರ ವೈಯಕ್ತಿಕ ಮತ್ತು ಸಂಘಟನಾತ್ಮಕ ಕಾರ್ಯಗಳನ್ನು ಸ್ಥೂಲವಾಗಿ ಪರಿಶೀಲಿಸಿ ವಿಶೇಷವಾಗಿ ಯಕ್ಷಗಾನ ಪ್ರಸಂಗ ಸಾಹಿತ್ಯಕ್ಕೆ ಅವರ ಕೊಡುಗೆಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ

ವಿಮರ್ಶಕರ ಗಮನಕ್ಕೆ ಸಾಕಷ್ಟು ಬೀಳದಿದ್ದರೂ ಕನ್ನಡದಲ್ಲಿ ನೂರಾರು ಯಕ್ಷಗಾನ ಪ್ರಸಂಗಗಳು ರಚಿತಗೊಂಡಿವೆ. ಇವುಗಳಲ್ಲಿ ಹಲವು ರಂಗಕ್ಕಾಗಿ ರಚಿತವಾದವುಗಳಾದರೂ ಸುಸಂಬದ್ಧ ಸಂವಿಧಾನ, ಕುತೂಹಲಕಾರಕ ಘಟನಾವಳಿಗಳು, ವೈವಿಧ್ಯರಂಜಕವಾದ, ಸಪ್ರಮಾಣ ರಸ ವ್ಯಂಜಕತೆಯಿಂದ ಕೂಡಿದ ಅಪೂರ್ವ ಕಲಾಕೃತಿಗಳು ಸಾಕಷ್ಟಿವೆ. ಯಕ್ಷಗಾನದ ಪ್ರಸಂಗಗಳನ್ನು ಸರಳ ಸಾಹಿತ್ಯದ ಸರಕೆಂದು ಲಘುವಾಗಿ ಆ ಕಡೆಗೆ ವಿಮರ್ಶಕರು ಗಮನಹರಿಸಲೇ ಇಲ್ಲ. ನಮ್ಮ ಅಧ್ಯಯನಶೀಲರ ಗಮನ ಜನಪದ ಸಾಹಿತ್ಯದ ಕಡೆಗೆ ಸಾಕಷ್ಟು ಹರಿದಿದ್ದರೂ ಅದಕ್ಕೆ ಹತ್ತಿರವಿರುವ ಯಕ್ಷಗಾನ ಪ್ರಸಂಗ ಕೃತಿಗಳ ಕಡೆಗೆ ಹರಿಯದಿರುವುದು ನಿಜಕ್ಕೂ ಆಶ್ಚರ್ಯಕರ.

ಪಾರ್ತಿಸುಬ್ಬ, ದೇವಿದಾಸ, ಹಟ್ಟಂಗಡಿ ರಾಮಭಟ್ಟ,ಮಟ್ಟಿ ವಾಸುದೇವ ಪ್ರಭು,ಸಂಕಯ್ಯ ಭಾಗವತ,ಮುದ್ದಣ, ಹಲಸಿನಹಳ್ಳಿ ನರಸಿಂಹ ಶಾಸ್ತ್ರಿ,ಕೀರಿಕ್ಕಾಡು ವಿಷ್ಣು ಮಾಸ್ತರ್, ಅಮೃತ

ಸೋಮೇಶ್ವರ ಮೊದಲಾದವರ ಪ್ರಸಂಗಗಳಲ್ಲಿ ಸಾಹಿತ್ಯಕ ಅಂಶಗಳು ಹೇರಳವಾಗಿದ್ದು ಯಕ್ಷಗಾನ ಪ್ರಸಂಗಗಳನ್ನು ಕಾವ್ಯದ ಸಾಲಿನಲ್ಲೇ ಗುರುತಿಸಬಹುದೆಂಬುದಕ್ಕೆ ಬಲವಾದ ಆಧಾರ ಒದಗಿಸುತ್ತವೆ. ಇದನ್ನು ದೃಷ್ಟಿಯಲ್ಲಿಟ್ಟುಕೊಂಡು ನೂರಕ್ಕೂ ಹೆಚ್ಚು ಯಕ್ಷಗಾನ ಪ್ರಸಂಗಗಳನ್ನು ರಚಿಸಿದ ಕೀರಿಕ್ಕಾಡು ವಿಷ್ಣು ಮಾಸ್ತರರ ಪ್ರಸಂಗಗಳನ್ನು ಮುಖ್ಯವಾಗಿ ಅಧ್ಯಯನಕ್ಕೆ ಇಲ್ಲಿ ಒಳಪಡಿಸಲಾಗಿದೆ.

ಯಕ್ಷಗಾನ ಮತ್ತು ಅದರ ವಿವಿಧ ಅಂಗಗಳ, ಪ್ರಸಂಗ ಸಾಹಿತ್ಯದ ಕುರಿತು ಈಗಾಗಲೇ ವಿವಿಧ ಕಡೆ ಸಾಕಷ್ಟು ಚರ್ಚೆಗಳು ನಡೆದಿವೆ.ಮುಳಿಯ ತಿಮ್ಮಪ್ಪಯ್ಯನವರ 'ಪಾರ್ತಿಸುಬ್ಬ', ಡಾ.ಶಿವರಾಮ ಕಾರಂತರ 'ಯಕ್ಷಗಾನ ಬಯಲಾಟ,'ರಾ.ಛ.ಹಾಸಣಗಿಯವರ 'ಯಕ್ಷನಾಟಕಗಳು', ಬಲಿಪ ನಾರಾಯಣ ಭಾಗವತರ 'ಸ್ಮರಣ ಗ್ರಂಥ',ಪೊಳಲಿ ಶಾಸ್ತ್ರಿಯವರ ಸ್ಮರಣ ಗ್ರಂಥ 'ಮಕರಂದ',ಅರ್ಕುಳ ಸುಬ್ರಾಯ ಆಚಾರ್ಯರ ಸ್ಮರಣ ಗ್ರಂಥ 'ಸ್ವರ್ಣಕಮಲ', ಮಾಂಬಾಡಿ ನಾರಾಯಣ ಭಾಗವತರ ಗೌರವ ಗ್ರಂಥ 'ರಂಗ ವೈಖರಿ', ಡಾ.ಶ್ರೀನಿವಾಸ ಹಾವನೂರು ಮತ್ತು ರಾಮಚಂದ್ರ ಉಚ್ಚಿಲ ಇವರ 'ಮುದ್ದಣ ಕವಿ ಮತ್ತು ಯಕ್ಷಗಾನ ಕವಿ ಚರಿತ್ರೆ', ಕು.ಶಿ.ಹರಿದಾಸ ಭಟ್ಟರ ಸಂಪಾದಕತ್ವದ'ಸಮಗ್ರ ಯಕ್ಷಗಾನ'ಮುಳಿಯ ಮಹಾಬಲ ಭಟ್ಟರ 'ಬಣ್ಣದ ವೇಷ ಮತ್ತು ಇತರ ಲೇಖನಗಳು', ಬಣ್ಣದ ಮಹಾಲಿಂಗರ ಗೌರವ ಗ್ರಂಥ 'ಬಣ್ಣ', ಕೆರೆಮನೆ ಮಹಾಬಲ ಹೆಗಡೆಯವರ ಗೌರವ ಗ್ರಂಥ 'ಯಕ್ಷಗಾನ ಮಹಾಬಲ', ಯಂ.ಪ್ರಭಾಕರ ಜೋಷಿಯವರ 'ಜಾಗರ', 'ಕೇದಗೆ', ಮಾರುಮಾಲೆ', 'ಕೃಷ್ಣ ಸಂಧಾನ ಪ್ರಸಂಗ ಮತ್ತು ಪ್ರಯೋಗ', ಆನಂದರಾಮ ಉಪಾಧ್ಯರ 'ರಾಮಾಯಣದ ಪ್ರಸಂಗಗಳು', 'ಮಹಾಭಾರತದ ಪ್ರಸಂಗಗಳು', ಪದವೀಧರ ಯಕ್ಷಗಾನ ಸಮಿತಿಯವರು ಪ್ರಕಟಿಸಿದ 'ಸಮ್ಮೇಳನ ಸ್ಮರಣ ಸಂಪುಟಗಳು', ಅಮೃತ ಸೋಮೇಶ್ವರರ 'ಯಕ್ಷಾಂದೋಳ' ಮುಂತಾದ ಗ್ರಂಥಗಳಲ್ಲಿ ಯಕ್ಷಗಾನದ ವಿವಿಧ ಆಯಾಮಗಳ ವೈವಿಧ್ಯಮಯ ವಿವೇಚನೆ ನಡೆದಿದೆ. ಹಾಗಿದ್ದಾಗ್ಯೂ ಯಕ್ಷಗಾನದ ವ್ಯಾಪ್ತಿ ಮತ್ತು ವೈವಿಧ್ಯವನ್ನು ಗಮನಿಸಿದಾಗ ಆಗಿರುವ ಅಧ್ಯಯನಗಳು ವಿಮರ್ಶೆಗಳು ಕಡಿಮೆಯೆಂದೇ ಹೇಳಬೇಕಾಗುತ್ತದೆ.

ಕರಾವಳಿಯ ಉದ್ದಕ್ಕೂ ಅಲ್ಲಲ್ಲಿ ಇರುವ ವೃತ್ತಿ ಮೇಳಗಳು,ಹವ್ಯಾಸಿ ತಂಡಗಳು,ಸಾವಿರಾರು ಸಂಖ್ಯೆಯಲ್ಲಿರುವ ಕಲಾವಿದರು ತಮ್ಮದೇ ಅನನ್ಯತೆಯನ್ನು ಹೊಂದಿರುವ ತೆಂಕು, ಬಡಗು,ತುಳು ತಿಟ್ಟು ಇವುಗಳ ಬಗೆಗೆ ವಿವರವಾದ ಅಭ್ಯಾಸ ಇನ್ನೂ ಆಗಬೇಕಿದೆ. ವ್ಯಕ್ತಿಗಳೇ ತಮ್ಮ ಕಲಾಸಕ್ತಿ, ಪ್ರೀತಿಯಿಂದ ಮಾಡಿರುವ ಸೇವೆ ಯಕ್ಷಗಾನದಂತಹ ಜನಪದ ಮೂಲದ ರಂಗಪ್ರಕಾರವನ್ನು ಉಳಿಸಿದೆ.

ಈ ನಂಬಿಕೆಯಿಂದ ಅಧ್ಯಯನಕ್ಕಿಳಿದಾಗ ಕಲೆಗಾಗಿ ಬದುಕು ಎಂಬಂತೆ ಬದುಕಿದ ಕೀರಿಕ್ಕಾಡು ವಿಷ್ಣು ಮಾಸ್ತರರು ಯಕ್ಷಗಾನಕ್ಕೆ ನೀಡಿದ ಕೊಡುಗೆ ಗಮನ ಸೆಳೆಯಿತು. ಇದರ ಫಲವೇ ಈ ಪ್ರಬಂಧ.

ಒಬ್ಬ ವ್ಯಕ್ತಿಯ ಸಾಧನೆಯನ್ನು ಅಧ್ಯಯನಕ್ಕೆ ಒಳಪಡಿಸುವಾಗ ಆತ ಬದುಕಿದ ಪರಿಸರ, ಆತನ ವೈಯಕ್ತಿಕ ವಿವರಗಳು,ಆತನ ಇತರೆ ಆಸಕ್ತಿಗಳ ಕುರಿತ ತಿಳುವಳಿಕೆ ಮುಖ್ಯವಾಗುತ್ತದೆ.ಈ ಹಿನ್ನೆಲೆಯಿಂದ ಪ್ರಬಂಧದ ಎರಡನೇ ಅಧ್ಯಾಯದಲ್ಲಿ ಕೀರಿಕ್ಕಾಡು ವಿಷ್ಣು ಮಾಸ್ತರರ ವೈಯಕ್ತಿಕ ವಿವರಗಳನ್ನು ಕುರಿತು ಚರ್ಚಿಸಲಾಗಿದೆ.ಬಹುಮುಖ ಪ್ರತಿಭೆಯ ಕೀರಿಕ್ಕಾಡು ಮಾಸ್ತರರು ಕವಿಯಾಗಿ, ಕಾದಂಬರಿಕಾರನಾಗಿ, ಯಕ್ಷಗಾನ ಅರ್ಥಧಾರಿಯಾಗಿ, ಸಂಘಟಕರಾಗಿ, ಯಕ್ಷಗಾನ ಗುರುವಾಗಿ ಸಲ್ಲಿಸಿದ ಸೇವೆಯನ್ನು ಈ ಅಧ್ಯಾಯದಲ್ಲಿ ಸ್ಥೂಲವಾಗಿ ವಿವೇಚಿಸಲಾಗಿದೆ. ಮುಂದಿನ ಅಧ್ಯಾಯದಲ್ಲಿ ಯಕ್ಷಗಾನ ಪ್ರಸಂಗ ಸಾಹಿತ್ಯದ ಕುರಿತ ಸಂಕ್ಷಿಪ್ತ ವಿವರಣೆಯ ಜತೆಗೆ ಕೀರಿಕ್ಕಾಡು ಮಾಸ್ತರರ ಪ್ರಕಟಿತ ಮತ್ತು ಅಪ್ರಕಟಿತ ಪ್ರಸಂಗಗಳ ವಿವರಗಳನ್ನು ನೀಡಲಾಗಿದೆ. ಜತೆಗೆ ಮಾಸ್ತರರ ಯಕ್ಷಗಾನ ಪ್ರಸಂಗಗಳ ವೈಶಿಷ್ಟ್ಯಗಳನ್ನು ಅಭ್ಯಾಸಕ್ಕೆ ಒಳಪಡಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಕೀರಿಕ್ಕಾಡು ಮಾಸ್ತರರ ಯಕ್ಷಗಾನ ಪ್ರಸಂಗಗಳಲ್ಲಿ ಪೌರಾಣಿಕ, ಐತಿಹಾಸಿಕ ಮತ್ತು ಇತರ ವಸ್ತುಗಳು ಹೇಗೆ ಬಳಸಲ್ಪಟ್ಟಿವೆ ಎಂಬುದನ್ನು ತಿಳಿಯುವ ಪ್ರಯತ್ನ ನಡೆಸಲಾಗಿದೆ.ಎಲ್ಲಾ ಪ್ರಸಂಗಗಳನ್ನು ಕುರಿತು ವಿವೇಚಿಸಲು ಈ ಪ್ರಬಂಧ ವ್ಯಾಪ್ತಿಯಲ್ಲಿ ಕಷ್ಟ ಮಾತ್ರವಲ್ಲ ಅದೊಂದು ಮಹಾಪ್ರಬಂಧಕ್ಕೆ ವಸ್ತುವಾಗಬಲ್ಲಷ್ಟು ವ್ಯಾಪ್ತಿಯುಳ್ಳದ್ದು ಎಂಬುದನ್ನು ಗ್ರಹಿಸಿ ಪ್ರಾತಿನಿಧಿಕ ಎನಿಸಿದ ಒಂದೊಂದು ಕೃತಿಗಳನ್ನು ಮುಖ್ಯವಾಗಿ ಎತ್ತಿಕೊಂಡು ಅಧ್ಯಯನ ಮಾಡಲಾಗಿದೆ.

ಮಾಸ್ತರರ ಯಕ್ಷಗಾನ ಪ್ರಸಂಗಗಳ ಸಾಹಿತ್ಯಿಕ ಮತ್ತು ಭಾಷಿಕ ಅಧ್ಯಯನವನ್ನು ಮುಂದಿನ ಭಾಗದಲ್ಲಿ ನಡೆಸಲಾಗಿದೆ.ತನ್ಮೂಲಕ ಪ್ರಸಂಗ ಸಾಹಿತ್ಯಕ್ಕೆ ಪ್ರತ್ಯೇಕ ಸಾಹಿತ್ಯ ಪ್ರಕಾರ ಎಂಬ ಗೌರವ ಸಲ್ಲಬೇಕು ಎಂಬ ಒತ್ತಾಯಕ್ಕೆ ಸಮರ್ಥನೆ ದೊರೆಯಬಹುದೆಂದು ನಿರೀಕ್ಷಿಸಲಾಗಿದೆ.

ಕೊನೆಯಲ್ಲಿ ಅಧ್ಯಯನದ ಫಲಿತಗಳನ್ನು ದಾಖಲಿಸಲಾಗುವುದು. ಸಂಕ್ಷಿಪ್ತವಾಗಿ ಮುಖ್ಯಾಂಶಗಳನ್ನಷ್ಟೇ ಇಲ್ಲಿ ನೀಡಲು ಉದ್ದೇಶಿಸಲಾಗಿದೆ.

ಇದು ಶುದ್ಧ ಪರಿಚಯಾತ್ಮಕ ಹಾಗೂ ವಿವರಣಾತ್ಮಕ ನೆಲೆಯ ಅಧ್ಯಯನವಾಗಿದೆ. ಕೀರಿಕ್ಕಾಡು ವಿಷ್ಣು ಮಾಸ್ತರರ ಕೆಲವು ಪ್ರಕಟಿತ ಯಕ್ಷಗಾನ ಪ್ರಸಂಗಗಳು ಮತ್ತು ಅವರ ಕುರಿತು ಬಂದಿರುವ ಕೆಲವು ಬಿಡಿಬರೆಹಗಳನ್ನು ಮುಖ್ಯ ಆಕರಗಳಾಗಿ ಬಳಸಿಕೊಳ್ಳಲಾಗಿದೆ. ಯಕ್ಷಗಾನದ ಕುರಿತಾಗಿ ಬಂದಿರುವ ಹಲವು ಮಹತ್ವದ ಪುಸ್ತಕಗಳನ್ನು ಪೂರಕ ಆಕರಗಳಾಗಿ ಬಳಸಿಕೊಂಡಿದ್ದೇನೆ.

ಕ್ಷೇತ್ರಕಾರ್ಯವನ್ನು ಮಾಡಿ ರಂಗಕೃತಿಯ ಅಧ್ಯಯನಕ್ಕೆ ಇನ್ನೂ ಹೆಚ್ಚಿನ ಸೂಕ್ಷ್ಮತೆಯನ್ನು ತರಲು ಸಾಧ್ಯವಿದೆಯಾದರೂ ಈ ಪ್ರಬಂಧದಲ್ಲಿ ಅದು ಸಾಧ್ಯವಾಗಿಲ್ಲ ಎಂಬುದು ಇಲ್ಲಿನ ಮಿತಿ. ಕೀರಿಕ್ಕಾಡು ವಿಷ್ಣು ಮಾಸ್ತರರ ಮಗ ಪ್ರಸಿದ್ಧ ಯಕ್ಷಗಾನ ಅರ್ಥಧಾರಿಗಳಾದ ಡಾ.ರಮಾನಂದ ಬನಾರಿಯವರೊಂದಿಗಿನ ಸಂದರ್ಶನ, ಕಾಸರಗೋಡಿನ ಯಕ್ಷಗಾನ ಪ್ರಸಂಗಗಳ ಬಗೆಗೆ ವಿಶೇಷ ಅಧ್ಯಯನ ನಡೆಸುತ್ತಿರುವ ಡಾ.ಉಪ್ಪಂಗಳ ಶಂಕರನಾರಾಯಣ ಭಟ್ ಮತ್ತು ಕೆಲವು ಹಿರಿಯ ಯಕ್ಷಗಾನ ಕಲಾವಿದರ ಜತೆಗಿನ ಮಾತುಕತೆಯಿಂದ ದೊರಕಿದ ಮಾಹಿತಿಗಳು ಇವಿಷ್ಟು ಈ ಪ್ರಬಂಧ ರಚನೆಗೆ ತುಂಬ ಸಹಾಯ ಮಾಡಿದೆ.

ಒಟ್ಟಿನಲ್ಲಿ ಯಕ್ಷಗಾನದ ಕುರಿತು ಸಮಗ್ರ ಕವಿಚರಿತ್ರೆಯೊಂದು ಇನ್ನೂ ರಚನೆಗೊಂಡಿರದೇ ಇರುವುದರಿಂದ ಈ ರೀತಿಯ ಅಧ್ಯಯನಗಳು ಈ ಕೊರಕಲನ್ನು ತುಂಬಿಯಾವು ಎಂಬ ವಿಶ್ವಾಸ ಪ್ರಬಂಧಕಾರರದು.ಈ ರೀತಿಯ ಅಭ್ಯಾಸಗಳು ಅಲ್ಲಲ್ಲಿ ನಡೆದರೆ ಅದು ಯಕ್ಷಗಾನ ಸಾಹಿತ್ಯರಚನೆಗೆ ಬಹುದೊಡ್ಡ ಕೊಡುಗೆಯನ್ನು ನೀಡಬಲ್ಲುದು.ಕೀರಿಕ್ಕಾಡು ಮಾಸ್ತರರು ಯಕ್ಷಗಾನ ರಂಗಕ್ಕೆ ಸಲ್ಲಿಸಿದ ಅನುಪಮ ಕೊಡುಗೆಗೆ ಇದೊಂದು ಪುಟ್ಟ ಕೃತಜ್ಞತೆಯೂ ಆದೀತು ಎಂಬುದು ಅಧ್ಯಯನ ನಡೆಸಿದ ವಿದ್ಯಾರ್ಥಿಯ ಆಶಯ.

# ಅಧ್ಯಾಯ ಎರಡು

## ಕೀರಿಕ್ಕಾಡು ವಿಷ್ಣು ಮಾಸ್ತರರ ವೈಯಕ್ತಿಕ ವಿವರಗಳು ಸಾಹಿತ್ಯ ಮತ್ತು ಯಕ್ಷಗಾನ ಪ್ರಯೋಗ ಪ್ರಯತ್ನಗಳು

# ಅಧ್ಯಾಯ ಎರಡು

ಕೀರಿಕ್ಕಾಡು ಮಾಸ್ಟರ್ ಎಂದೇ ಖ್ಯಾತರಾದ ಕೀರಿಕ್ಕಾಡು ವಿಷ್ಣು ಭಟ್ಟರು ಯಕ್ಷಗಾನ ಲೋಕಕ್ಕೆ ನೀಡಿದ ಕೊಡುಗೆ ಅನುಪಮವಾದುದು. ವೃತ್ತಿಯಲ್ಲಿ ಶಿಕ್ಷಕರಾಗಿ ಪ್ರವೃತ್ತಿಯಾಗಿ ಯಕ್ಷಗಾನವನ್ನು ಆರಿಸಿಕೊಂಡ ಅವರು ಕೆಲವು ವರ್ಷಗಳ ಬಳಿಕ ಯಕ್ಷಗಾನವನ್ನೇ ಬದುಕಾಗಿಸಿಕೊಂಡವರು. ಯಕ್ಷಗಾನ ಆಟ, ತಾಳಮದ್ದಲೆ ಕೂಟಗಳ ಸಂಘಟಕರಾಗಿ, ಶ್ರೇಷ್ಠ ದರ್ಜೆಯ ಅರ್ಥಧಾರಿಯಾಗಿ, ಯಕ್ಷಗಾನ ತರಬೇತುದಾರರಾಗಿ, ಪ್ರಸಿದ್ಧ ಪ್ರಸಂಗಕರ್ತರಾಗಿ ಅವರು ಮಾಡಿದ ಸಾಧನೆ ಅಪೂರ್ವವಾದುದು.

## ೨.೧ ವ್ಯಕ್ತಿ ಜೀವನ

೧೯೧೯ರ ಆಗಸ್ಟ್ ನಾಲ್ಕರಂದು ಕೀರಿಕ್ಕಾಡು ಎಂಬಲ್ಲಿ ವಿಷ್ಣು ಭಟ್ಟರು ಜನಿಸಿದರು. ತಂದೆ ಕೇಶವ ಭಟ್ಟರು. ತಾಯಿ ಲಕ್ಷ್ಮಿ ಅಮ್ಮ.ಸಾಧಾರಣ ಮಧ್ಯಮ ವರ್ಗದ ಕೃಷಿಕ ಕುಟುಂಬದಲ್ಲಿ ಜನಿಸಿದ ವಿಷ್ಣು ಭಟ್ಟರು ಕರುವಳ್ತಡ್ಕದ ಸರಕಾರಿ ಕಿರಿಯ ಬುನಾದಿ ಶಾಲೆ, ಯೇತಡ್ಕ ಶಾಲೆಗಳಲ್ಲಿ ತಮ್ಮ ಆರಂಭಿಕ ವಿದ್ಯಾಭ್ಯಾಸವನ್ನು ಪಡೆದರು.ತೀವ್ರ ಆರ್ಥಿಕ ಅಡಚಣೆಯಿಂದಾಗಿ ಐದನೇ ಇಯತ್ತೆಯಲ್ಲಿಯೇ ಕಲಿಕೆಗೆ ಪೂರ್ಣವಿರಾಮ ನೀಡಬೇಕಾಯಿತು.

ಅನಂತರ ತಮ್ಮ ೧೮ರ ವಯಸ್ಸಿನಲ್ಲಿಯೇ ವಿದ್ಯಾ ವಿನೋದಿನಿ ಶಾಲೆಯ ಮುಖ್ಯೋಪಾಧ್ಯಾಯರಾಗಿ ಉಪಾಧ್ಯಾಯ ವೃತ್ತಿಯನ್ನು ಆರಂಭಿಸಿದ್ದರು. ೧೯೩೭ರಿಂದ ೧೯೭೩ರವರೆಗೆ ಉಪಾಧ್ಯಾಯ ವೃತ್ತಿಯಲ್ಲಿ ತೊಡಗಿಸಿಕೊಂಡ ವಿಷ್ಣು ಮಾಸ್ತರರು ಅನಂತರ ಪೆರಡಾಲ ಸಮೀಪದ ಕೀರಿಕ್ಕಾಡನ್ನು ಬಿಟ್ಟು ಜಾಲ್ಸೂರಿಗೆ ಸಮೀಪದ ದೇಲಂಪಾಡಿಯ ಬನಾರಿಯಲ್ಲಿ ಬಂದು ನೆಲೆಸಿದರು. ಮತ್ತೂ ಎರಡು ವರ್ಷಗಳ ಕಾಲ ಕೀರಿಕ್ಕಾಡು ಶಾಲೆಯಲ್ಲಿ ಉಪಾಧ್ಯಾಯ ವೃತ್ತಿಯನ್ನು ಮುಂದುವರಿಸಿದರು.

೧೯೩೦ರಲ್ಲಿ ಮರಕಿಣಿ ಗೋವಿಂದ ಭಟ್ಟ ಮತ್ತು ಶಂಕರಿ ಅಮ್ಮನವರ ಪುತ್ರಿ ಪರಮೇಶ್ವರಿಯನ್ನು ವಿವಾಹವಾದರು.ಏಳು ಗಂಡು ಮತ್ತು ನಾಲ್ಕು ಹೆಣ್ಣು ಮಕ್ಕಳ ತುಂಬು ಸಂಸಾರ ಇವರದು.

ಕೃಷಿ ಮನೆತನದಲ್ಲಿ ಹುಟ್ಟಿದ ಅವರು ಕೊನೆಯವರೆಗೂ ಕೃಷಿಕರಾಗಿಯೇ ಬಾಳಿದರು. ಅವರು ನಿಸರ್ಗ ಚಿಕಿತ್ಸೆಯಲ್ಲಿ ಎತ್ತಿದ ಕೈ.ಸುತ್ತಮುತ್ತಲಿನ ಜನಕ್ಕೆ ಅವರು ಚಿಕಿತ್ಸಾ ಸೇವೆಯನ್ನೂ ಉಚಿತವಾಗಿ ನೀಡುತ್ತಿದ್ದರು.

ಅವರ ಕಲಾಸೇವೆಯನ್ನು ಪರಿಗಣಿಸಿ ೧೯೪೪ಳ ರಲ್ಲಿಯೇ ಅಂದಿನ ಎಡನೀರು ಮಠಾಧೀಶರಾದ ಶ್ರೀ ಈಶ್ವರಾನಂದ ಸ್ವಾಮೀಜಿ ಪದಕವನ್ನಿತ್ತು ಗೌರವಿಸಿದ್ದರು.ಕಾಸರಗೋಡು ಕನ್ನಡ ಬಳಗದ ಸನ್ಮಾನ,ಕಾಸರಗೋಡು ಕನ್ನಡಿಗರ ಸಮ್ಮೇಳನದ ಸನ್ಮಾನ,ಎಡನೀರು ಶ್ರೀ ಕೇಶವಾನಂದ ಸ್ವಾಮೀಜಿಯವರಿಂದ ಸನ್ಮಾನ ಪತ್ರ,ಪೆರ್ನಾಜೆ ಸೀತಾರಾಘವ ಕಲಾಸಂಘ ಮತ್ತು ಪಾಣಾಜೆ ಲಯನ್ಸ್ ಕ್ಲಬ್ ವತಿಯಿಂದ ವಿಷ್ಣುಭಟ್ಟರಿಗೆ ಗೌರವಗಳು ಸಂದಿವೆ. ಅವರು ಯಕ್ಷಗಾನ ಕ್ಷೇತ್ರಕ್ಕೆ ಸಲ್ಲಿಸಿದ ಕೊಡುಗೆಯನ್ನು ಗಮನಿಸಿದರೆ ಅವರಿಗೆ ದೊರಕಿದ ಗೌರವ ಕಡಿಮೆಯೇ. ಆದರೆ ಯಾವತ್ತೂ ಹೊಗಳಿಕೆ ಪ್ರಶಸ್ತಿಗಳಿಂದ ದೂರವಿದ್ದವರು ಮಾಸ್ತರರು.

ಕಲೆಗಾಗಿ ಬದುಕನ್ನು ಸಮರ್ಪಿಸಿದ ಕೀರಿಕ್ಕಾಡು ಮಾಸ್ತರರು ೧೯೮೭ರ ಮಾರ್ಚ್ ಆರರಂದು ಇಹಲೊಕ ತ್ಯಜಿಸಿದರು.

ಕಂಡೆತ್ತೋಡಿ ನಾರಾಯಣ ಕೇಕುಣ್ಣಾಯರ ಗರಡಿಯಲ್ಲಿ ಪಳಗಿದ ಇವರು ಮುಂದೆ ಬನಾರಿ ಯಕ್ಷಗಾನ ಸಂಘವನ್ನು ಸ್ಥಾಪಿಸಿದರು. ‘ಮುನಿಯೂರು ಕೃಷ್ಣ’ ಎಂಬ ಅಂಕಿತದಲ್ಲಿ ಯಕ್ಷಗಾನ ಪ್ರಸಂಗಗಳನ್ನು ಬರೆಯುತ್ತಿದ್ದರು."ಅದ್ಭುತ ವಿಘ್ನನಿವಾರಣ ಮಧುಪುರ ಗಜವದನಾ"ಎಂಬ ಸ್ಮರಣೆಯನ್ನು ಪ್ರಸಂಗದ ಆರಂಭದಲ್ಲಿ ಕಾಣಬಹುದು.

## ೨.೨ ಸಾಹಿತ್ಯ

### ೨.೨.೧.ಕವಿಯಾಗಿ

ಕೀರಿಕ್ಕಾಡು ಮಾಸ್ತರರು ಎರಡು ಕಾವ್ಯ ಸಂಕಲನಗಳನ್ನು ಪ್ರಕಟಿಸಿದ್ದಾರೆ.ಒಂದು ‘ಕಾವ್ಯ ಕುಸುಮಗಳು’, ಇನ್ನೊಂದು ‘ವಿಷ್ಣು ಶರಣನ ದರ್ಪಣ.’

‘ಕಾವ್ಯ ಕುಸುಮಗಳು’ ಸಂಕಲನದಲ್ಲಿ ಕೃಷಿ, ದುಡಿಮೆಯ ಮಹತ್ವ,ಹಳ್ಳಿ ಜೀವನದ ಸೊಗಸನ್ನು ಸಾರಿದ್ದಾರೆ.

"ವಿದ್ಯೆಯ ಕಲಿವುದು ನೌಕರಿಗಲ್ಲ
ವಿದ್ಯೆಯ ಕಲಿವುದು ಮರುಗಲಿಕಲ್ಲಾ
ವಿದ್ಯೆಯ ಕಲಿವುದು ಜ್ಞಾನಕೆ ದಾರೀ
ವಿದ್ಯಾವಂತನೇ ದುಡಿಮೆಗಾಧಾರಿ"

ಎನ್ನುವುದು ಅವರ ನಿಲುವು.ಸ್ವಾತಂತ್ರ್ಯ ಪ್ರಾಪ್ತಿ ಮತ್ತು ಗಾಂಧೀಜಿಯವರ ಬೋಧನೆಗಳ ಪ್ರಭಾವದ ಪರಿಣಾಮದಿಂದಾಗಿ ಸ್ವಾವಲಂಬನೆಯತ್ತ ಜನತೆ ಗಮನಹರಿಸಬೇಕು.ಪರಾವಲಂಬನೆಯಿಂದ ಉದ್ಧಾರ

ಸಾಧ್ಯವಿಲ್ಲ ಎಂಬುದನ್ನು ಈ ಸಂಕಲನದ ಕವಿತೆಗಳು ಹೇಳುತ್ತವೆ.ಸಂಕಲನದ ಬಹುತೇಕ ಕವನಗಳಲ್ಲಿ ವಿಷ್ಣು ಮಾಸ್ತರರ ಪ್ರಗತಿಪರ ಮತ್ತು ಜನಪರ ಧೋರಣೆಯನ್ನು ಕಾಣಬಹುದಾಗಿದೆ.

'ಓರ್ವ-ಇನ್ನೋರ್ವ' ಕವಿತೆಯಲ್ಲಿ ಶ್ರೀಮಂತ ಬಡವರ ಅಂತರವನ್ನು ಚಿತ್ರಿಸಿದರೆ 'ಹರಿಜನರ ಮೊರೆ' ಎಂಬ ಕವಿತೆಯಲ್ಲಿ

"ಹರಿಜನರೆಂದರೆ ಹರದಾರಿ ದೂರ
ಸರಿಯುವದೇಕಿಷ್ಟು ನಮ್ಮಳೀನ್ವೈರ?
ಪರಮಾತ್ಮನಿದಿರೊಳು ನಾವೆಲ್ಲರೊಂದೇ
ಪರಮಾತ್ಮನೊಬ್ಬನೇ ನಮಗೆಲ್ಲಾ ತಂದೆ"

ಎಂಬ ಸಮಾನತೆಯ ಆಶಯವನ್ನು ಬಿಂಬಿಸಿದ್ದಾರೆ.ಸರ್ವಮತ ಸಮನ್ವಯ ಮತ್ತು ವಿಶ್ವಸೋದರತೆಯ ಸಂದೇಶವನ್ನು ಹೊತ್ತ ಒಂದು ಕವಿತೆಯಲ್ಲಿ

'ಮತಮತವೆನ್ನುವ ಮತಿಗೆಡಲೇತಕೆ
ಮತಹಲವಾದರೂ ಗುರಿಯೊಂದೇ
ಮತವೆಲ್ಲವೂ ಪರಮಾತ್ಮನ ಸೇರುವ
ಪಥ ಹೊರತೇನಿಹುದದರಿಂದೇ?'

ಎಂದಿದ್ದಾರೆ.ಮನುಷ್ಯರ ನಡುವೆ ಪ್ರೀತಿ,ಸಹಕಾರಭಾವದೊಂದಿಗೆ ನೈತಿಕ ಮತ್ತು ಸಾಮಾಜಿಕ ಪ್ರಜ್ಞೆ ಇರಬೇಕೆಂದು ಈ ಸಂಕಲನದ ಕವಿತೆಗಳು ಸಾರುತ್ತವೆ.

ಕೀರಿಕ್ಕಾಡು ಮಾಸ್ತರರ ಎರಡನೆಯ ಸಂಕಲನ 'ವಿಷ್ಣು ಶರಣನ ದರ್ಪಣ' ೧೯೬೭ರಲ್ಲಿ ಪ್ರಕಟಗೊಂಡಿತು.'ವಿಷ್ಣು ಶರಣ' ಎಂಬ ಅಂಕಿತ ಹೊಂದಿರುವ "ಅ" ಅಕ್ಷರದಿಂದ "ಕ್ಷ"ದವರೆಗಿನ ನಲುವತ್ತೆಂಟು ಅಕ್ಷರಗಳಿಂದ ಮೊದಲಾಗುವ ೩೫೬ ಚೌಪದಿಗಳು ಇಲ್ಲಿ ಅನುಕ್ರಮವಾಗಿವೆ.
ಮಂಕುತಿಮ್ಮನ ಕಗ್ಗ, ಸರ್ವಜ್ಞನ ತ್ರಿಪದಿಗಳಂತೇ ಜೀವನಾನುಭವ ದರ್ಶನಗಳನ್ನು ಒದಗಿಸುವ ಕೃತಿಯಿದು.
ಉದಾ:

ಅತಿಯಾಸೆ ಗತಿಕೇಡು ಆತ್ಮ ಶ್ಲಾಘನೆಯ ಬಿಡು
ಮತಿಗೆ ಮನಸನು ನೀಡು ಮಥಿಸಿ ನೋಡು
ಹಿತ ಕಂಡುದನು ಮಾಡು ಹಿರಿತನಕೆ ಮಣೆಯ ಕೊಡು
ಸತತ ಸತ್ಯವ ನಾಡು ವಿಷ್ಣು ಶರಣಾ

ಸಾಮಾಜಿಕ ಕಾಳಜಿ,ಮೂಢನಂಬಿಕೆ ವಿರೋಧಿ ನಿಲುವು,ರಸಿಕ ಸೌಂದರ್ಯ ಪ್ರಜ್ಞೆ,ಪತಿಧರ್ಮ,ಕನ್ನಡ ಪ್ರೀತಿ ಮೊದಲಾದ ಹಲವು ವಿಷಯಗಳನ್ನೊಳಗೊಂಡ ಚೌಪದಿಗಳಲ್ಲಿವೆ.

### ೨.೨.೨.ಕಾದಂಬರಿಕಾರರಾಗಿ

ರುಂಡವಿಲ್ಲದ ಮುಂಡ, ಸಿಂಗರದ ಉಂಗುರ,ಕರವಸ್ತ್ರ, ರಹಸ್ಯಕೊಲೆ, ಪತ್ತೇದಾರಿ ರಮಾನಂದ ಇವು ಮಾಸ್ತರರ ಕಾದಂಬರಿಗಳು. ಇವೆಲ್ಲವೂ ಪತ್ತೇದಾರಿ ಕಾದಂಬರಿಗಳು. ಬದುಕು ಬರಡಲ್ಲ ಎಂಬ ಸಾಮಾಜಿಕ ಕಾದಂಬರಿಯನ್ನು ಇವರು ಬರೆದಿದ್ದಾರೆ.

ನಗರ ಪ್ರದೇಶದ ಘಟನಾವಳಿಗಳೇ ಬಹುತೇಕ ಪತ್ತೇದಾರಿ ಕಾದಂಬರಿಗಳ ವಸ್ತು. ಆದರೆ ಓರ್ವ ಹಳ್ಳಿಯಲ್ಲೇ ಬೆಳೆದ ಮಾಸ್ತರರು ಪತ್ತೇದಾರಿ ಕಾದಂಬರಿ ಬರೆದುದು ಆಶ್ಚರ್ಯ. ಇವರ ಕಾದಂಬರಿಗಳ ವೈಶಿಷ್ಟ್ಯವೆಂದರೆ ದಟ್ಟ ಸಾಮಾಜಿಕ ಚಿತ್ರಣ. ಇಲ್ಲಿ ಬರುವ ಪಾತ್ರಗಳಿಗೆ ಮತ್ತು ಸನ್ನಿವೇಶಗಳಿಗೆ ಪ್ರಾದೇಶಿಕತೆಯ ಮೆರುಗು ಇದೆ. 'ಗ್ರಾಮೀಣ ಸಂಸ್ಕೃತಿಯು ನಗರ ಸಂಸ್ಕೃತಿಗೆ ಮಾರು ಹೋಗಿ ಬದಲಾಗುವ ಸಂಕ್ರಮಣಾವಸ್ಥೆಯಲ್ಲಿ ಮೂಡಿಬರುವ ಅಭಿಪ್ರಾಯಗಳಿಗೆ ಮಾಸ್ತರರ ಕಾದಂಬರಿಗಳು ಧ್ವನಿಯಾಗುತ್ತದೆ'[೧] ಎಂದು ವೇಣುಗೋಪಾಲ ಕಾಸರಗೋಡು ಅಭಿಪ್ರಾಯಪಡುತ್ತಾರೆ,

### ೨.೩ ಯಕ್ಷ ಜೀವನ

'ಕೀರಿಕ್ಕಾಡಿನಲ್ಲಿರುವಾಗಲೇ ಮಾಸ್ತರರು ಆಸಕ್ತಿಯಿಂದ ಸೇರುತ್ತಿದ್ದ ಶಿಷ್ಯರಿಗೆ ಯಕ್ಷಗಾನ ತರಬೇತಿ ನೀಡುತ್ತಿದ್ದರು'[೨]. ಅದಕ್ಕೆ ವ್ಯವಸ್ಥಿತವಾದ ರೂಪು ಬಂದದ್ದು ಬನಾರಿಯಲ್ಲಿ. ಅನಕ್ಷರಸ್ಥರೇ ಹೆಚ್ಚಾಗಿದ್ದ ದೇಲಂಪಾಡಿ ಎಂಬ ಗ್ರಾಮೀಣ ಪ್ರದೇಶದಲ್ಲಿ ವಿಷ್ಣು ಭಟ್ಟರು ತಮ್ಮ ಮನೆಯ ಮುಳಿ ಮಾಡಿನ ಚಾವಡಿಯಲ್ಲಿ ಯಕ್ಷಗಾನ ತರಬೇತಿ ಶಾಲೆಯನ್ನು ಆರಂಭಿಸಿದರು.ಈ ಶಾಲೆ ನಿರಂತರ ದಶಕಗಳ ಕಾಲ ನಡೆಯಿತು.

ಮಾಸ್ತರರು ಆರಂಭಿಸಿದ ಈ ಯಕ್ಷಗಾನ ತರಬೇತಿ ಶಾಲೆ ಸುತ್ತಲಿನ ಊರುಗಳಲ್ಲಿ ಹೆಸರುವಾಸಿಯಾಗಿತ್ತು. ಯಕ್ಷಗಾನ ಕ್ಷೇತ್ರದ ಪ್ರಸಿದ್ಧ ಕಲಾವಿದರೆಂದು ಗುರುತಿಸಲ್ಪಟ್ಟಿರುವ ಕೇದಗಡಿ ಗುಡ್ಡಪ್ಪ ಗೌಡ, ಅಣ್ಣಯ್ಯ ಭಂಡಾರಿ,ಕಂಸ ನಾರಾಯಣ ರೈ, ಗುತ್ತು ನಾರಾಯಣ ರೈ,ಕೆ.ವಿ.ನಾರಾಯಣ ರೈ, ಯು.ಬಿ.ಗೋವಿಂದಯ್ಯ, ಲಕ್ಷ್ಮೀನಾರಾಯಣ ಕಲ್ಲೂರಾಯ, ಡಿ.ಮಾಲಿಂಗ ಪಾಟಾಳಿ, ಮುದಿಯಾರು ರಾಮಪ್ಪ ಗೌಡ, ಎಂಕಣ್ಣ ಮೂಲೆ ಕೃಷ್ಣ ಮನೋಳಿತ್ತಾಯ, ಮೈಯಾಳ ಮೇಘನಾಥ ರೈ, ಬದಿಯಡ್ಕದ ಮಹಾಲಿಂಗ ಗೌಡ, ಬೆಳ್ಳಿಪ್ಪಾಡಿಕುಂಞಣ್ಣ ರೈ, ಬನದ ಮೂಲೆ ಸೇಸಪ್ಪ ಗೌಡ ಮೊದಲಾದ ಹಲವಾರು ಕಲಾವಿದರನ್ನು ತರಬೇತುಗೊಳಿಸಿದ ಕೀರ್ತಿ ಈ ಶಾಲೆಯದ್ದು.

ಯಾವ ಶಿಷ್ಯನಿಂದಲೂ ಕಲಿಸಿದ್ದಕ್ಕೆ ಬಿಡಿಗಾಸನ್ನೂ ಶಿಷ್ಯವೇತನವಾಗಿ ಪಡೆಯದ ಕೀರಿಕ್ಕಾಡು ವಿಷ್ಣು ಮಾಸ್ತರರು ಆರ್ಥಿಕವಾಗಿ ಹಿಂದುಳಿದವರಿಗೆ ಸ್ವತಃ ತಮ್ಮ ದುಡಿಮೆಯಿಂದಲೇ ಸಹಕಾರ ನೀಡುತ್ತಿದ್ದರು.ಶಿಷ್ಯರನ್ನು ಸುಸಂಸ್ಕೃತ, ಚಾರಿತ್ರ್ಯಶೀಲರನ್ನಾಗಿಸುವ ಉದ್ದೇಶದಿಂದ ಶಾಲೆಯಲ್ಲಿ ಬೀಡಿ,ಸಿಗರೇಟು, ಚುಟ್ಟ,ಮದ್ಯಪಾನ ಸೇವನೆಗೆ ನಿಷೇಧವನ್ನು ಹೇರಿದ್ದರು.

೧೯೨೮ರಲ್ಲಿ ತನ್ನ ಹದಿನೈದನೇ ವರ್ಷದಲ್ಲಿ ಯಕ್ಷಗಾನ ಅರ್ಥಗಾರಿಕೆಗಿಳಿದ ಮಾಸ್ತರರು ಮುಂದೆ ನಾಲ್ಕು ದಶಕಗಳಷ್ಟು ದೀರ್ಘಕಾಲ ಯಕ್ಷಗಾನ ಕ್ಷೇತ್ರದಲ್ಲಿ ವಿವಿಧ ಆಯಾಮಗಳಲ್ಲಿ ಸೇವೆ ಸಲ್ಲಿಸಿದರು. ೧೯೪೪ರಲ್ಲಿ ಬನಾರಿಯಲ್ಲಿ 'ಶ್ರೀಗೋಪಾಲಕೃಷ್ಣ ಯಕ್ಷಗಾನ ಕಲಾ ಸಂಘ'ವನ್ನು ಸ್ಥಾಪಿಸಿ ಯಕ್ಷಗಾನ ತರಬೇತಿಯನ್ನು ಆರಂಭಿಸಿದ ಬಳಿಕ ಕೀರಿಕ್ಕಾಡರು ಕಲೆಯೇ ಬದುಕೆಂಬಂತೆ ಬಾಳಿದರು. ಈ ಕಲಾಸಂಘದಲ್ಲಿ ತರಬೇತುಗೊಂಡ ಕಲಾವಿದರು ಅಲ್ಲಲ್ಲಿ ಯಕ್ಷಗಾನ ಪ್ರದರ್ಶನಗಳನ್ನು ನೀಡಿದರು. ವಿಷ್ಣು ಮಾಸ್ತರರು ಈ ಕಾರ್ಯಕ್ರಮಗಳಲ್ಲಿ ಸ್ವತಃ ಭಾಗವಹಿಸುತ್ತಿದ್ದರು. ಕೀರಿಕ್ಕಾಡು, ಮುನಿಯೂರು, ಬೊಳ್ಳೂರು, ಎಡನೀರು, ಶುಂಠಿಕೊಪ್ಪ, ಉಪ್ಪಿನಂಗಡಿ, ಅಜ್ಜಾವರ, ಸುಳ್ಯ, ಪೆರ್ಲಂಪಾಡಿ, ಪಂಜಿಕಲ್ಲು, ಕನಕಮಜಲು ಮೊದಲಾದೆಡೆಗಳಲ್ಲಿ ಆಗಾಗ ಪ್ರದರ್ಶನಗಳನ್ನು ನಡೆಸುತ್ತಿದ್ದರು.

### ೨.೩.೧ ಅರ್ಥಧಾರಿಯಾಗಿ

ಕೀರಿಕ್ಕಾಡು ಮಾಸ್ತರರು ಯಕ್ಷಗಾನ ಅರ್ಥಗಾರಿಕೆಯ ಕ್ಷೇತ್ರಕ್ಕೆ ಅಪೂರ್ವ ಕೊಡುಗೆ ಸಲ್ಲಿಸಿದ ಪಂಡಿತರು. ನಾಲ್ಕು ದಶಕಗಳ ಕಾಲ ಯಕ್ಷಗಾನ ಅರ್ಥಗಾರಿಕೆಯಲ್ಲಿ ತೊಡಗಿಸಿಕೊಂಡ ಇವರಿಗೆ ಆಳವಾದ ಪುರಾಣ ಜ್ಞಾನ ಮತ್ತು ಅದ್ಭುತ ಪ್ರತ್ಯುತ್ಪನ್ನಮತಿತ್ವವಿತ್ತು. ವಿಷ್ಣು ಮಾಸ್ತರರ ಪಾಂಡಿತ್ಯ ಮತ್ತು ಅನುಭವಗಳು ಅಪಾರ. ಅದಕ್ಕೆ ಅವರ ಕವಿಹೃದಯದ ಮೆರುಗು ಕೂಡಿಕೊಂಡು ಅರ್ಥಗಾರಿಕೆಯ ಕಲೆಗೆ ಸ್ವಂತಿಕೆಯ ಛಾಪನ್ನು ಒತ್ತಿದರು. 'ಕುಮಾರವ್ಯಾಸ ಭಾರತ, ತೊರವೆ ರಾಮಾಯಣ, ಚಾಟುವಿಠಲನಾಥನ ಕನ್ನಡ ಭಾಗವತ, ತುರಂಗ ಭಾರತ,ಆನಂದ ರಾಮಾಯಣ, ಜೈಮಿನಿಭಾರತ, ಶಿವಪುರಾಣ ಮುಂತಾದ ಗ್ರಂಥಗಳು ಅವರಿಗೆ ಚಿರಪರಿಚಿತ'[೩] ಈ ಕೃತಿಗಳ ತುಲನಾತ್ಮಕ ಅಧ್ಯಯನದಿಂದ ಹೊಸ ವ್ಯಾಖ್ಯಾನಗಳನ್ನು ಒಳನೋಟಗಳನ್ನು ನೀಡಬಲ್ಲ ಶಕ್ತಿ ಮಾಸ್ತರರಿಗಿತ್ತು. ಅಲ್ಲದೇ ಪಂಪಭಾರತ, ಗದಾಯುದ್ಧ, ಪಂಪರಾಮಾಯಣ ಮೊದಲಾದ ಕಾವ್ಯಭಾಗಗಳನ್ನು ಅವರು ಚೆನ್ನಾಗಿ ಅರ್ಥೈಸಿಕೊಂಡಿದ್ದರು.

ಅವರು ತಾಳಮದ್ದಲೆಯ ಅರ್ಥಗಾರಿಕೆಗೆ ಕುಳಿತುಕೊಳ್ಳುವುದೇ ಒಂದು ಸೊಗಸು. ಅದನ್ನು ವಿದ್ವಾನ್ ವೆಂಕಟರಾಜ ಪುಣಿಂಚಿತ್ತಾಯರು ಹೀಗೆ ಬರೆಯುತ್ತಾರೆ. "ಕಂಠದ ಹಿಂಬದಿಯವರೆಗೆ ಇಳಿಬಿದ್ದ ದಟ್ಟವಾದ ಗುಂಗುರು ಕೂದಲು, ದಪ್ಪನೆಯ ಮೀಸೆ, ಉದ್ದಕೈಯ ಅಂಗಿ, ಅದರ ಮೇಲೊಂದು ವಾಸ್ಕೋಟು-ಇವಿಷ್ಟು ಕಂಡ ಕೂಡಲೇ ನಮ್ಮ ಗಮನ ಸೆಳೆಯುವ ಮಾಸ್ತರರ ಬಹಿರಂಗ ಚಿತ್ರಣ. ತಾಳಮದ್ದಲೆಯ ವೇದಿಕೆಯಲ್ಲಿ ಮಾಸ್ತರರದು ಒಂದು ಸುಂದರ ಪಾತ್ರ-ಹೊರಗಣ್ಣಿಗೆ. ಆ ಪಾತ್ರ ನೀಡುವ ಸುಂದರ ಚಿತ್ರಣವಂತೂ ಆಪ್ಯಾಯಮಾನ -ಒಳಗಣ್ಣಿಗೆ"[೪]

ಕನ್ನಡ ಭಾಷಾ ದೃಷ್ಟಿಯಿಂದ ಮಾಸ್ತರರ ಅರ್ಥಗಾರಿಕೆಯ ರಸಧಾರೆಯಿಮದ ನಿಡಿದ ಕೊಡುಗೆ ಗಮನಾರ್ಹ.ಭಾಷ ಶುದ್ಧತೆ, ಪ್ರಯೋಗ, ಸ್ಫುಟತೆ, ಆಯ್ಕೆ ಎಲ್ಲವೂ ಮಾಸ್ತರರ ಅರ್ಥಗಾರಿಕೆ ಮತ್ತು ಪ್ರಸಂಗದ ಮೂಲಕ ಬಹುಜನರನ್ನು ತಟ್ಟಿದ ಎಂಬುದಕ್ಕೆ ಯಕ್ಷರಸ ಚೇತನ ಎಂಬ ಪುಸ್ತಕದಲ್ಲಿ ನಾಡಿನ ಹಿರಿಯರು ಬರೆದಿರುವ ಲೇಖನಗಳು ಸಾಕ್ಷಿ ನುಡಿಯುತ್ತವೆ.

ಮಾಸ್ತರರು ಅರ್ಥ ಹೇಳಲು ಕುಳಿತರೆ ಕಲಿಯುಗವು ದ್ವಾಪರವೂ, ತ್ರೇತಾ ಯುಗವೋ ಆಗುತ್ತಿತ್ತು ಅವರು ಮಾಡುವ ಅಂಗದ ಪಾತ್ರವಂತೂ ಮರೆಯಲಾಗದ್ದು ಎನ್ನುತ್ತಾರೆ ಕೆ.ಕೇಶವ ಭಟ್. ಅವರು ಅರ್ಥಗಾರಿಕೆಯಲ್ಲಿ ಬಳಸುವ ಒಂದೊಂದು ಶಬ್ದವೂ ವಿದ್ವತ್ ಪೂರ್ಣವೂ ಔಚಿತ್ಯಮಯವು ಆಗಿರುತ್ತಿತ್ತು. ಕೆಲವು ಆಯ್ದ ಉದಾಹರಣೆಗಳು ಇಲ್ಲಿವೆ.

ಅರ್ಥಗಾರಿಕೆಯಲ್ಲಿ ಮಾಸ್ತರರದು ಏರು ಸ್ವರ. ಪಂಚಮದಿಂದ ಷಡ್ಜದವರೆಗೂ ಅವರ ಸ್ವರ ಸಂಚಾರ.ಭಾಗವತರ ಶ್ರುತಿಯನ್ನೇ ಅನುಸರಿಸಿ ಅರ್ಥಹೇಳುವ ಅವರ ಅರ್ಥಗಾರಿಕೆ ಸಹೃದಯರ ಗಮನವನ್ನು ಸೆಳೆದೇ ಸೆಳೆಯುತ್ತದೆ ಎನ್ನುತ್ತಾರೆ ವಿಚಿತ್ರ ಏತಡ್ಕ. ಪ್ರಕೃತಿ ಮೊದಲಾದ ವರ್ಣನೆಯ ಸಂದರ್ಭ ಬಂದಾಗ ಸ್ವಯಂ ಕವಿಯಾಗಿಯೇ ಅರ್ಥವನ್ನು ನಿರೂಪಿಸುವ ವಿಷ್ಣುಭಟ್ಟರು ಕೇಳುಗರನ್ನು ಮಂತ್ರಮುಗ್ಧಗೊಳಸುತ್ತಿದ್ದರು,

ಹೊಸ ಯುವ ಅರ್ಥಧಾರಿಗಳನ್ನು ಸಾಕಷ್ಟು ಬೆಳೆಸಿದ ಕೀರ್ತಿ ಅವರಿಗೆ ಸಲ್ಲುತ್ತದೆ.ಯಕ್ಷಗಾನದ ಸ್ವಾಧ್ಯಾಯ ಯಾವುದು? ಮೊದಲನೆಯದು ಪುರಾಣ ಕಥೆಗಳು; ಅದಕ್ಕೆ ಅಳಸಿಂಗಾಚಾರ್ಯರ ರಾಮಾಯಣ ಭಾಗವತಾದಿ ಕೃತಿಗಳನ್ನು ಓದಬೇಕಂತೆ.ಎರಡನೇಯದು ಪ್ರಸಂಗ ಪುಸ್ತಕ. ಪ್ರಸಂಗ ಪುಸ್ತಕದ ಎಲ್ಲ ಪದ್ಯಗಳು ಬಾಯಿಪಾಠ ಇರಬೇಕು. ಇದು ಹೊಸ ಅರ್ಥಧಾರಿಗಳಿಗೆ ಅವರು ನೀಡುತ್ತಿದ್ದ ಮಾರ್ಗದರ್ಶನ[೫]

ಕೀರಿಕ್ಕಾಡು ವಿಷ್ಣು ಮಾಸ್ತರರಿಗೆ ಯಕ್ಷಗಾನ ರಂಗದಲ್ಲಿ ಮಾರ್ಗದರ್ಶಕರಾಗಿದ್ದವರು ಕಂಡೆತ್ತೋಡಿ ನಾರಾಯಣ ಕೇಕುಣ್ಣಾಯರು. ಯಕ್ಷಗಾನ ರಂಗದ ಪ್ರಸಿದ್ಧ ಅರ್ಥಧಾರಿಗಳು. ಕರ್ಣ, ಭೀಷ್ಮ, ಅಂಗದ, ಜರಾಸಂಧ, ವಾಲಿ, ರಾವಣ, ಸುಧನ್ವ ಇವು ಮಾಸ್ತರರ ಮೆಚ್ಚಿನ ಪಾತ್ರಗಳು. ಯಾವುದೇ ಪಾತ್ರವಿರಲಿ ಆ ಪಾತ್ರದ ಘನತೆಗೆ ಸರಿಯಾಗಿ ಅರ್ಥ ಹೇಳುವುದರಲ್ಲಿ ಎತ್ತಿದ ಕೈ.ಪೊಳಲಿ ಶಂಕರನಾರಾಯಣ ಶಾಸ್ತ್ರಿಗಳು,ಕೆ.ಪಿ.ವೆಂಕಪ್ಪ ಶೆಟ್ಟಿ,ನಾರಾಯಣ ಕಿಲ್ಲೆ, ಶ್ರೀಪತಿ ಶಾಸ್ತ್ರಿ, ಸುಬ್ರಾಯ ಆಚಾರಿ ಇವರೆಲ್ಲ ಮಾಸ್ತರರ ಜತೆ ಅರ್ಥಹೇಳುತ್ತಿದ್ದವರು. ಅರ್ಥಗಾರಿಕೆಯಲ್ಲಿ ಹೆಸರುವಾಸಿಯಾಗಿರುವ ಶಂಕರನಾರಾಯಣ ಸಾಮಗ, ಶೇಣಿ ಗೋಪಾಲಕೃಷ್ಣ ಭಟ್ಟ,ದೇರಾಜೆ ಸೀತಾರಾಮಯ್ಯ,ಕಾಂತ ರೈ,ಮೊದಲಾದವರು ಸಹ ಮಾಸ್ತರರ ಒಡನಾಟದಲ್ಲಿದ್ದವರು. ಬಲಿಪ ನಾರಾಯಣ ಭಾಗವತರು, ಮೈಂದಪ್ಪ ರೈ,ಮಹಾಬಲ ನೋಂಡಾ, ಪುತ್ತಿಗೆ ರಾಮಕೃಷ್ಣ ಜೋಯಿಸರು, ದಾಮೋದರ ಮಂಡೆಚ್ಚ, ಮಾಂಬಾಡಿ ನಾರಾಯಣ ಭಾಗವತರು ಇವರ ಮೆಚ್ಚಿನ ಭಾಗವತರು.

### ೨.೩.೨ ಯಕ್ಷರಸ ಜೀವನ

ಇದು ಕೀರಿಕ್ಕಾಡು ವಿಷ್ಣು ಮಾಸ್ತರರ ಆತ್ಮವೃತ್ತಾಂತ.ಯಕ್ಷಗಾನ ಕಲೆಯ ಬೆಳವಣಿಗೆಯೊಂದಿಗೆ ಹೆಣೆದುಕೊಂಡಿರುವ ತನ್ನ ಬದುಕಿನ ಬೆಳವಣಿಗೆಯ ವಿವಿಧ ಹಂತಗಳನ್ನು ಇಲ್ಲಿ ನಿರೂಪಿಸಿದ್ದಾರೆ. ಈ ಜೀವನ ಕಥನ ಸರಳ, ಹೃದ್ಯವಾಗಿದೆ. ಮನಸ್ಸನ್ನು ಮುದಗೊಳಿಸುತ್ತದೆ. ಅವರ ಬರವಣಿಗೆಯ ಹೃದ್ಯತೆಗೆ ಒಂದು ತುಣುಕು ಹೀಗಿದೆ." ಆಗ ಮನೆಗಳಲ್ಲಿ ಚಾ ಕಾಫಿಯ ಸುದ್ದಿಯೇ ಇರಲಿಲ್ಲ. ಮಕ್ಕಳಿಗೆಲ್ಲಾ ಬೆಳಗ್ಗೆ ಗಂಜಿಯೂಟ.ದೊಡ್ಡವರಿಗೆ ಬೇಕಿದ್ದರೆ ಕೊತ್ತಂಬರಿ ಜೀರಿಗೆ ಕಷಾಯ, ಒಂದಿಷ್ಟು ಅವಲಕ್ಕಿಯೋ ಹುರಿಯಕ್ಕಿಯೋ ಅಷ್ಟೇ. ಈ ಕ್ರಮಬದ್ಧವಾದ ಜೀವನ ನಿಷ್ಠೆ ಪ್ರತಿಯೊಂದರಲ್ಲೂ ಎದ್ದು ಕಾಣುತ್ತಿತ್ತು. ನಿಶ್ಚಿತ ಸಮಯದಲ್ಲದೇ ಆಗಾಗ ಅದೂ ಇದೂ ಎಂತ ತಿಂಡಿ ತಿನಸುಗಳನ್ನು ಮೆಲ್ಲುವ ಪದ್ಧತಿಯಂತೂ ಇಲ್ಲವೇ ಇಲ್ಲ....."[೬]

ಹಳ್ಳಿಯ ಸೊಗಸಾದ ಚಿತ್ರಣ, ಬಾಲ್ಯದ ಶಾಲಾಜೀವನದ ವಿವರಗಳು,ಉಪಾಧ್ಯಾಯ ವೃತ್ತಿ,ಸಂಸಾರದ ಮೇಲಿನ ಪ್ರೀತಿ,ಕೃಷಿ ಜೀವನದ ರಸಕ್ಷಣಗಳು,ಯಕ್ಷಗಾನ ಪ್ರಸಂಗ ಬರೆಯುವಾಗಿನ ಅನುಭವಗಳು, ಶಿಷ್ಯರ ಜತೆಗಿನ ಒಡನಾಟ ಇತ್ಯಾದಿ ಈ ಕೃತಿಯ ಉದ್ದಕ್ಕೂ ಕಾಣಿಸಿಕೊಳ್ಳುತ್ತದೆ. ಇವೆಲ್ಲದರ ಜತೆಗೆ ಸೂತ್ರದಂತೆ ಹೆಣೆದುಕೊಂಡಿರುವ ವಿಷಯ ಯಕ್ಷಗಾನ. ತಾಳಮದ್ದಲೆಯಲ್ಲಿ ಪಾತ್ರಕ್ಕೆ ಜೀವತುಂಬುವಾಗ ಅವರಿಗೆ ಹೊಳೆದ ಕಾವ್ಯಾತ್ಮಕ ಒಳನೋಟಗಳ ಸ್ವಾರಸ್ಯಗಳನ್ನು ಈ ಕೃತಿಯಲ್ಲಿ ದಾಖಲಿಸಿದ್ದಾರೆ. ಎಷ್ಟೋ ಕೂಟಗಳಲ್ಲಿ ಅರ್ಥಹೇಳುವಾಗ ಕೆಣಕಲು ಬಂದವರಿಗೆ ವಿಷ್ಣುಭಟ್ಟರು ಪ್ರತ್ಯುತ್ತರ ಕೊಟ್ಟು ಮಣಿಸಿದ ಅನೇಕ ಪ್ರಸಂಗಗಳು ಈ ಆತ್ಮ ಕಥನದಲ್ಲಿದೆ.

ಅನೇಕ ಕಡೆ ಮಾಸ್ತರರು ಅನುಭವವನ್ನು ಬರೆಯುವಾಗ ಕವಿಯೇ ಆಗಿಬಿಡುತ್ತಾರೆ. "ಬೇಸಿಗೆಯ ಬಿಸಿಲ ಬೇಗೆಯಿಂದ ಬೆಂದ ನೆಲ, ಹೊಲಗಳ ಸಾಂತ್ವನಕ್ಕೆ ಬಾಂದಳದತ್ತಣಿಂದ ಮಂದಮಾರುತ ಸಂದೇಶ ತಂದನೋ ಎಂಬಂತೆ ತಂಪಾದ ಗಾಳಿ ಸೊಂಪಾಗಿ ಬೀಸ ತೊಡಗಿತು. ಮೇಘರಾಜನ ಸುತ್ತಾಟದ ಮುನ್ಸೂಚನೆಯ ಡಂಗುರದ ಹಾಗೆ ಸಿಡಿಲು ಗುಡುಗುಗಳು ಗುಡುಗುಡಿಸಿದವು. ಆಗ ಸಾಂಗನೆಯೆತ್ತುವ ಆರತಿಯೋ ಎನ್ನುವಂತೆ ಆಗಾಗ ಮಿಂಚುವ ವಿದ್ಯುತ್ಪ್ರಭಾವಳಿಯ ಹೊಳಪೇರಿತು.ಅಂತೂ ಬಂತೇ ಬಂತು ವರ್ಷಾಕಾಲ...."[೭]

ಕುಮಾರವ್ಯಾಸ ಒಂದು ಕಡೆ "ಖಡುಗಧಾರೆಯ ಮಧು,ಮಹಾಹಿಯ ಹೆಡೆಯ ಮಾಣಿಕ, ವಜ್ರದಿಂ ಬಿಗಿದೊಡಲಗೊಡ್ಡಿದ ಸುರಗಿ" ಎಂದು ಹೇಳಿದ್ದಾನೆ. ಆತ ಹೇಳಿರುವುದು ರಾಜನ ಕುರಿತಾದರೂ ಈ ಮಾತು ಆತ್ಮಚರಿತಗಾರನಿಗೂ ಅನ್ವಹಿಸುತ್ತದೆ. ಅಂತಹ ಕಷ್ಟದ ಬರವಣಿಗೆಯಲ್ಲೂ ಸಮತೋಲನದ ತೂಕದ ಬರವಣಿಗೆಯನ್ನು ಮಾಸ್ತರರು ನೀಡಿದ್ದಾರೆ.

ಕೀರಿಕ್ಕಾಡು ವಿಷ್ಣು ಮಾಸ್ತರರು ಗ್ರಾಮೀಣ ಪ್ರದೇಶದಲ್ಲಿ ಶಿಕ್ಷಣ, ಸಾಹಿತ್ಯ ಮತ್ತು ಯಕ್ಷಗಾನ ಕ್ಷೇತ್ರದಲ್ಲಿ ಮಾಡಿದ ಕೊಡುಗೆ ಅನನ್ಯವಾದುದು.ಇವೆಲ್ಲದರ ನಡುವೆ ಅವರಿಗಿದ್ದ ಸಾಮಾಜಿಕ ಕಾಳಜಿ, ಪ್ರಗತಿಪರ ಚಿಂತನೆ, ಕಲಾಪ್ರೀತಿ, ಅದಮ್ಯ ಜೀವನೋತ್ಸಾಹ ಆ ಕಾಲದ ಮತ್ತು ಮುಂದಿನ ಕಾಲದ ಜನರಿಗೆ ಮಾರ್ಗದರ್ಶಿ ರೂಪದ್ದು.

## ಸಂದರ್ಭಸೂಚಿ


೧.ವೇಣುಗೋಪಾಲ ಕಾಸರಗೋಡು- ಕೀರಿಕ್ಕಾಡು ಅವರ ಪತ್ತೇದಾರಿ ಕಾದಂಬರಿಗಳು
ಯಕ್ಷರಸಚೇತನ ಪು.ಸಂ-೫೯

೨.ಶೇಣಿ ಗೋಪಾಲಕೃಷ್ಣ ಭಟ್ ಯಕ್ಷಗಾನ ಮತ್ತು ನಾನು ಪು.ಸಂ.೪೫

೩.ಗೋಪಾಲಕೃಷ್ಣ ಶಾಸ್ತ್ರಿ ಯಕ್ಷರಸ ಚೇತನ ಸಂಭಾವನಾ ಗ್ರಂಥ ಪು.ಸಂ. ೪೩

೪.ವೆಂಕಟರಾಜ ಪುಣಿಂಚಿತ್ತಾಯ: 'ಅರ್ಥಗಾರಿಕೆಯ ಇತಿಹಾಸಕ್ಕೆ ಕೀರಿಕ್ಕಾಡು ವಿಷ್ಣುಭಟ್ಟರ
ಕೊಡುಗೆ' ಲೇಖನ-ಉದಯವಾಣಿ ೧೪-೧೦-೧೯೯೫

೫.ವೆಂಕಟರಾಜ ಪುಣಿಂಚಿತ್ತಾಯ: 'ಅರ್ಥಗಾರಿಕೆಯ ಇತಿಹಾಸಕ್ಕೆ ಕೀರಿಕ್ಕಾಡು ವಿಷ್ಣುಭಟ್ಟರ
ಕೊಡುಗೆ' ಲೇಖನ-ಉದಯವಾಣಿ ೧೪-೧೦-೧೯೯೫

೬.ಕೀರಿಕ್ಕಾಡು ವಿಷ್ಣು ಮಾಸ್ತರ್ : 'ಯಕ್ಷರಸ ಜೀವನ' ಆತ್ಮವೃತ್ತಾಂತ ಪು.ಸಂ ೧೦

೭. ಕೀರಿಕ್ಕಾಡು ವಿಷ್ಣು ಮಾಸ್ತರ್ : 'ಯಕ್ಷರಸ ಜೀವನ' ಆತ್ಮವೃತ್ತಾಂತ ಪು.ಸಂ.೧೮

# ಅಧ್ಯಾಯ ಮೂರು

## ಕೀರಿಕ್ಕಾಡರ ಯಕ್ಷಗಾನ ಪ್ರಸಂಗಗಳು

## ಪ್ರಕಟಿತ ಮತ್ತು ಅಪ್ರಕಟಿತ ಹಾಗೂ ಪ್ರಸಂಗ ವೈಶಿಷ್ಟ್ಯ

೩.೧ ಮಾಸ್ತರರ ಪ್ರಕಟಿತ ಯಕ್ಷಗಾನ ಕೃತಿಗಳು

೩.೧.೧ ಅರ್ಥಸಹಿತವಿರುವ ಯಕ್ಷಗಾನ ಪ್ರಸಂಗಗಳು

೩.೧.೨ ಅಪ್ರಕಟಿತ ಪ್ರಸಂಗಗಳು

೩.೨ ಮಾಸ್ತರರ ಪ್ರಸಂಗಗಳ ವೈಶಿಷ್ಟ್ಯ

೩.೨.೧ ಪ್ರಸಂಗಗಳಿಗೆ ಅರ್ಥವಿವರಣೆ

# ಅಧ್ಯಾಯ ಮೂರು

ಯಕ್ಷಗಾನದಲ್ಲಿ ಪ್ರದರ್ಶನಕ್ಕೆ ಆಶ್ರಯಿಸುವ ಸಾಹಿತ್ಯವನ್ನು ಪ್ರಸಂಗ ಸಾಹಿತ್ಯ ಎನ್ನುತ್ತೇವೆ.ದಕ್ಷಿಣ ಕರ್ನಾಟಕದ ಜನಪದ ರಂಗಭೂಮಿ ಕುರಿತು ಸಂಶೋಧನೆ ಮಾಡಿದ ಡಾ.ಡಿ.ಕೆ.ರಾಜೇಂದ್ರ ಅವರು 'ಪ್ರಸಂಗ' ಎಂದರೆ ಮೂಲಕಥೆಯಿಂದ ಆಯ್ದುಕೊಂಡ ಒಂದು ಸನ್ನಿವೇಶ, ಒಂದು ಕಥಾಭಾಗ ಅಥವಾ ಹರಿಕಥೆಯ ಮಧ್ಯೆ ಹಾಡಿನೊಂದಿಗೆ ಹೇಳುವ ಉಪಕಥೆ ಎಂಬ ಅರ್ಥಗಳಿವೆ ಎನ್ನುತ್ತಾರೆ.[೧]

ಯಕ್ಷಗಾನದಲ್ಲಿ ಕಥಾಭಾಗದ ಹಾಡುಸೃಷ್ಟಿಯೇ ಪ್ರಸಂಗ.ಬಯಲಾಟಕ್ಕೂ, ತಾಳಮದ್ದಲೆಗೂ ಇದುವೇ ಪಠ್ಯ.ಇದು ಹಾಡುಗಬ್ಬ.ಪ್ರದರ್ಶನಕ್ಕೆ ಪ್ರಧಾನ ಸೂತ್ರವಾಗಿರುವ ಈ ಪ್ರಸಂಗ ಸಾಹಿತ್ಯ ಸಾಹಿತ್ಯ ವಲಯದಲ್ಲಿ ಪ್ರತ್ಯೇಕ ಪ್ರಕಾರ ಎಂಬಂತೆ ಇತ್ತೀಚೆಗೆ ಅಲ್ಪಸ್ವಲ್ಪ ಗುರುತಿಸಲ್ಪಡುತ್ತಿದೆ. ಹೆಚ್ಚಾಗಿ ಈ ಪ್ರಸಂಗಗಳು ಮಹಾಭಾರತ, ರಾಮಾಯಣ, ಭಾಗವತ, ಪುರಾಣ ಇತ್ಯಾದಿಗಳನ್ನು ಆಕರವಾಗಿ ಹೊಂದಿವೆ. ಇವಲ್ಲದೆ ಕಾಲ್ಪನಿಕ, ಐತಿಹಾಸಿಕ, ಸಾಮಾಜಿಕ, ಜಾಗೃತಿಕೇಂದ್ರಿತ ಕಥೆಗಳನ್ನು ಬಳಸಿಕೊಂಡುದೂ ಇದೆ.

ಯಕ್ಷಗಾನ ಪ್ರಸಂಗ ಸಾಹಿತ್ಯಕ್ಕೆ ಚಾಲನೆಯನ್ನೂ ಭದ್ರ ಬುನಾದಿಯನ್ನೂ ಹಾಕಿಕೊಟ್ಟವ ಯಕ್ಷಗಾನದ ಆಚಾರ್ಯ ಪುರುಷ ಎಂದೇ ಖ್ಯಾತನಾದ ಕುಂಬಳೆಯ ಪಾರ್ತಿಸುಬ್ಬ. ಆತ ರಾಮಾಯಣವನ್ನು ಆಧರಿಸಿ ೬ ಪ್ರಸಂಗಗಳನ್ನು ಮತ್ತು ಭಾಗವತವನ್ನು ಆಧರಿಸಿ ೨ ಪ್ರಸಂಗಗಳನ್ನು ರಚಿಸಿದ್ದಾನೆ.

ಅನಂತರ "ಕ್ರಿ.ಶ ೧೮೨೦ರ ಈಚೆಗೆ ಪೆರುವಡಿ ಸಂಕಯ್ಯ ಭಾಗವತರು,ನಾರಂಪಾಡಿ ನಾರಾಯಣ ಭಾಗವತರು, ಕಾಸರಗೋಡು ಸುಬ್ರಾಯ, ಕುದ್ರೆಪ್ಪಾಡಿ ಈಶ್ವರಯ್ಯ, ತೋಟ ತಿರುಮಲೇಶ್ವರ ಭಟ್ಟ, ಸಾರಡ್ಕ ಶಂಭಟ್ಟ, ಬನ್ನೂರು ನಾರಾಯಣ ಭಾಗವತ, ಖಂಡಿಗೆ ಕೃಷ್ಣ ಭಟ್ಟ, ಚವರ್ಕಾಡು ಶಂಭಟ್ಟ, ಮೇಳ ರಾಮಪ್ಪ ಭಟ್ಟ, ಕುಂಬಳೆ ನರಸಿಂಹ ಲಕ್ಷ್ಮಣ ನಾಯಕ, ಪಟ್ಟಾಜೆ ಶಂಭಟ್ಟ, ಪಟ್ಟಾಜೆ ಶಂಕರನಾರಾಯಣ ಭಟ್ಟ, ಜತ್ತಿ ಈಶ್ವರ ಭಾಗವತ, ಮುಂಡೋಡು ನಾರಾಯಣ, ಪುತ್ತಿಗೆ ರಾಮಕೃಷ್ಣ ಜೋಯಿಸ, ಬಲಿಪ ನಾರಾಯಣ ಭಾಗವತರು ಮೊದಲಾದವರು ಕೆಲವು ಪ್ರಸಂಗಗಳನ್ನು ಬರೆದು ಯಕ್ಷಗಾನ ಪ್ರಸಂಗ ಸಾಹಿತ್ಯ ಪ್ರಕಾರವನ್ನು ಶ್ರೀಮಂತಗೊಳಿಸಿದ್ದಾರೆ."[೨]

ಇಂತಹ ಸಂದರ್ಭದಲ್ಲಿ ದಾಖಲೆಯ ತೊಂಬತ್ತಕ್ಕಿಂತಲೂ ಅಧಿಕ (ಅದು ನೂರರ ಗಡಿ ದಾಟಿರಬೇಕೆಂಬುದು ಅನೇಕರ ಅಭಿಮತ) ಪ್ರಸಂಗಗಳನ್ನು ಬರೆದು ಪ್ರಸಂಗ ಸಾಹಿತ್ಯಕ್ಕೆ ದೊಡ್ಡ ಕೊಡುಗೆ ನೀಡಿದವರು ಕೀರಿಕ್ಕಾಡು ವಿಷ್ಣು ಮಾಸ್ತರರದು.

## ೩.೧ ಮಾಸ್ತರರ ಪ್ರಕಟಿತ ಯಕ್ಷಗಾನ ಕೃತಿಗಳು

ಮಾಸ್ತರರ ಯಕ್ಷಗಾನ ಕೃತಿಗಳು ರಂಗದಲ್ಲಿ ಪ್ರದರ್ಶನಗೊಂಡಿವೆಯಾದರೂ ಎಲ್ಲವೂ ಪ್ರಕಟಣೆಯನ್ನು ಕಂಡಿಲ್ಲ.ಪ್ರಕಟವಾಗಿರುವ ಕೃತಿಗಳು ೨೩.

೧.ಶ್ವೇತ ಕುಮಾರ ಚರಿತೆ (ಶಿವಪಂಚಾಕ್ಷರೀ ಮಹಿಮೆ)
೨.ಶಿವನಾಮ ಮಹಿಮೆ
೩.ಕಂಜಾಕ್ಷಿ ಕಲ್ಯಾಣ
೪.ಪುಷ್ಪವೇಣಿ ಕಲ್ಯಾಣ
೫.ಅಮೋಘವರ್ಷ ನೃಪತುಂಗ
೬.ಕನಕಲೇಖಾ
೭.ಭೀಮ ಶಂಕರ ಮಹಿಮೆ
೮.ಪಾಂಚಜನ್ಯ
೯.ಊರ್ವಶಿ ಪುರೂರವ
೧೦.ಬ್ರಹ್ಮಯಜ್ಞ(ಗಾಯತ್ರಿ ಪರಿಣಯ)
೧೧.ಮಿತ್ರಗುಪ್ತ ವಿಜಯ
೧೨.ಜರಾಸಂಧ ಪರಾಭವ
೧೩.ಭ್ರಮರ ಕುಂತಳೆ
೧೪.ಮೃಗಾವತೀ ಪರಿಣಯ
೧೫.ಸುಲೋಚನಾ ಸ್ವಯಂವರ
೧೬.ವೀರ ಅಭಿಮನ್ಯು
೧೭.ಸೀತಾ ಪರಿತ್ಯಾಗ
೧೮.ಪ್ರಭಾವತಿ ಪರಿಣಯ
೧೯.ರಾಜಾ ಸುದರ್ಶನ
೨೦.ಕಲ್ಪ ಸುಂದರಿ ಕಲ್ಯಾಣ
೨೧.ದುರ್ಗಾ ಮಹಿಮೆ
೨೨.ರಕ್ಷಾ ಕವಚ
೨೩.ಸ್ವಯಂಪ್ರಭಾ ಪರಿಣಯ

### ೩.೧.೧ ಅರ್ಥಸಹಿತವಿರುವ ಯಕ್ಷಗಾನ ಪ್ರಸಂಗಗಳು: ಒಟ್ಟು ಆರು

೧.ಜರಾಸಂಧ ವಧೆ
೨.ಖರಾಸುರ ವಧೆ
೩.ಕರ್ಣಾವಸಾನ
೪.ತುಳಸೀ ಶಂಖಚೂಡ
೫.ಕುಮಾರ ವಿಜಯ
೬.ಶ್ರೀರಾಮ ಪಟ್ಟಾಭಿಷೇಕ (ಪಾರ್ತಿಸುಬ್ಬನ ಪ್ರಸಂಗಕ್ಕೆ ಅರ್ಥ)

### ಅಪ್ರಕಟಿತ ಕೃತಿಗಳು

ಕೀರಿಕ್ಕಾಡು ಮಾಸ್ತರರ ಹಲವು ಕೃತಿಗಳು ಅಪ್ರಕಟಿತ.ಮೂಡಂಬೈಲು ಗೋಪಾಲಕೃಷ್ಣ ಶಾಸ್ತ್ರಿಗಳು ಅಂತಹ ಎಪ್ಪತ್ತೆಂಟು ಕೃತಿಗಳಿವೆ ಎನ್ನುತ್ತಾರೆ.[೨] ೧೯೮೦-೮೪ರ ನಡುವೆ ಅನಾರೋಗ್ಯದಿಂದಾಗಿ ಕೂಟಗಳಿಂದ ದೂರವಿರಬೇಕಾದ ಸಂದರ್ಭ ಬಂದಾಗ ಪ್ರಾಯಶ; ಇವರು ಹೆಚ್ಚು ಪ್ರಸಂಗಗಳನ್ನು ಬರೆದಿರಬೇಕು.ಅವರ ಅಪ್ರಕಟಿತ ಪ್ರಸಂಗ ಕೃತಿಗಳು ಇವು.

೧.ಪ್ರದೋಷ ಮಹಾತ್ಮೆ
೨.ರುಕ್ಮಾವತೀ ಕಲ್ಯಾಣ
೩.ರಘುನಾಥ ವಿಜಯ
೪.ಬಭ್ರುವಾಹನ
೫.ಕ್ಷೇಮಂಕರೀ ದೇವಿ ಮಹಿಮೆ
೬.ಗಜಾಸುರ ಮೋಕ್ಷ
೭.ವೀರಮಣಿ
೮.ಅಶ್ರುಬಿಂದುಮತಿ
೯.ದೂಷಣಾಸುರ ಕಾಳಗ
೧೦.ಏಕವೀರ ಏಕಾವಲೀ
೧೧.ಕಾಮೋಧೆ
೧೨.ಅಷ್ಟಾಕ್ಷರೀ ಮಹಿಮೆ
೧೩.ಸ್ವಾಮಿನಿಷ್ಟ ಎಚ್ಚಮ
೧೪.ರಾಜಹಂಸ
೧೫.ಶೃಗಾಲ ಕಾಳಗ
೧೬.ನವಮಾಲಿಕಾ ಪರಿಣಯ
೧೭.ಷಟ್ಪುರ
೧೮.ರಕ್ಷಾಮಣಿ
೧೯.ಶಿವಕವಚ
೨೦.ಶಿವಮಂತ್ರ ಮಹಿಮೆ
೨೧.ರಕ್ಷರತ್ನಹಾರ
೨೨.ಇಕ್ಷ್ವಾಕು ವಿಜಯ
೨೩.ಸೋಮದತ್ತ ವಿಜಯ
೨೪.ಜಾನಭ ಚರಿತ್ರೆ
೨೫.ಭಕ್ತ ಸುಭಾಹು
೨೬.ರಾಜೇಯ ಪರಾಜಯ
೨೭.ಚಂದ್ರಸೇನ ಚಿಂತಾಮಣಿ
೨೮.ರಜಿಯಭ್ಯುದಯ
೨೯.ಸುಮದ್ಯೋಪಾಖ್ಯಾನ
೩೦.ಕಾಲನೇಮ ಕಾಳಗ
೩೧.ವೀರಮಣಿ ಕಾಳಗ
೩೨.ಸಾಹಸಚಂದ್ರ
೩೩.ಕುಶಲವ
೩೪.ಶುಭಾಂಗಿ
೩೫.ಅಶೋಕ ಸುಂದರಿ
೩೬.ಪುಷ್ಪೋದ್ಧವ
೩೭.ಪ್ರಭಾವತಿ ಪರಿಣಯ
೩೮.ವೀರೇಶ್ವರ
೩೯.ವಿಶ್ರುಕ ವಿಜಯ
೪೦.ಕಾಲಯವನ ಕಾಳಗ
೪೧.ಇಂದ್ರೋತ್ಕರ್ಷ
೪೨.ಗೋಕರ್ಣ ಕ್ಷೇತ್ರ ಮಹಾತ್ಮೆ
೪೩.ಭಾನುಮತಿ ಪರಿಣಯ
೪೪.ಶ್ರೀರಾಮೋಶ್ವಮೇಧದ ಭಕ್ತ
೪೫.ಸೋಲಗಾವಸಾನ
೪೬.ಕುಲಬಾಲಿಕಾ
೪೭.ಮಣಿಕರ್ಣಿಕಾ
೪೮.ವಾಮಲೋಚನ
೪೯.ರತ್ನಪ್ರಭ
೫೦.ಸೀಮಂತಿನಿ ಕಲ್ಯಾಣ
೫೧.ಸೀತಾರಾಮ ವಿಜಯ
೫೨.ವೀರರಮಣಿ
೫೩.ಅಂಗದ ಸಂಧಾನ
೫೪.ವಿಭೀಷಣ ನೀತಿ
೫೫.ವೀರ ಅಭಿಮನ್ಯು
೫೬.ಭಕ್ತ ಪ್ರಹ್ಲಾದ

೫೭.ಸೀತಾಪಹಾರ

೫೮.ರಾಜಹಂಸ ಪರಾಜಯ

೫೯.ಬಾಲಚಂದ್ರಿಕಾ

೬೦.ಅಂಬಾಲಿಕಾ

೬೧.ಮಂಜುವಾಹಿನಿ

೬೨.ಭಕ್ತಸುರತ

೬೩.ಜಯಸಿಂಹ ವಿಜಯ

೬೪.ಕಚೋಪಖ್ಯಾನ

೬೫.ಭ್ರಮರ ಕುಂತಳೆ

೬೬.ಗೌತಮ ವಿಜಯ

೬೭.ಮದ್ಯೋಚ್ಚಾಟನೆ

೬೮.ಭ್ರಮರ ವೇಣಿ ಸ್ವಯಂವರ

೬೯.ಮಣಿಪ್ರಭ ಪರಿಣಯ

೭೦.ಚಂದ್ರಪ್ರಭ ಪರಿಣಯ

೭೧.ಚಂದ್ರಹಾಸ

೭೨.ರಾಜವಾಹನ ವಿಜಯ

೭೩.ಶ್ರೀಮತಿ ಪರಿಣಯ

## ೩.೨ ಮಾಸ್ತರರ ಪ್ರಸಂಗಗಳ ವೈಶಿಷ್ಟ್ಯಗಳು

ಕೀರಿಕ್ಕಾಡು ಮಾಸ್ತರರು ಹೆಚ್ಚು ಓದಿದವರಲ್ಲ.ಅವರು ಸಾಂಪ್ರದಾಯಿಕ ಶಿಕ್ಷಣ ಪಡೆದುದು ಆರನೆಯ ತರಗತಿವರೆಗೆ ಮಾತ್ರ.ಸ್ವಾಧ್ಯಾಯದಿಂದ ಹಲವಾರು ಪ್ರಸಂಗಗಳನ್ನು ಓದಿ ಅಭ್ಯಾಸ ಮಾಡಿ ರಾಮಾಯಣ, ಮಹಾಭಾರತ, ಭಾಗವತಗಳನ್ನು, ಬೇರೆ ಬೇರೆ ಪುರಾಣ ಕಥೆಗಳನ್ನು ತಿಳಿದುಕೊಂಡವರು. ಪ್ರಸಿದ್ಧ ಅರ್ಥಧಾರಿ ನಾರಾಯಣ ಕೇಕುಣ್ಣಾಯರಿಂದ ಅರ್ಥಗಾರಿಕೆಯ ನೆಲೆಗಳನ್ನು ತಿಳಿದುಕೊಂಡು,ಯಕ್ಷಗಾನ ಕೂಟಗಳಲ್ಲಿ ಅವರೊಂದಿಗೆ ಭಾಗವಹಿಸಿ ಅದರ ಒಳಹೊರಗನ್ನು ತಿಳಿದುಕೊಂಡರು. ಇದರಿಂದ ಅವರೊಬ್ಬ ಪ್ರಸಿದ್ಧ ಅರ್ಥಧಾರಿಗಳಾಗಿ, ಪ್ರಸಂಗಕರ್ತರಾಗಿ ರೂಪು ಪಡೆಯಲು ಸಹಾಯಕವಾಯಿತು.

ಮಾಸ್ತರರೇ ತಮ್ಮ ಆತ್ಮವೃತ್ತಾಂತದಲ್ಲಿ ಹೇಳಿಕೊಂಡಂತೇ ಅವರು ೧೯೪೫ರಲ್ಲಿ ಕಚೋಪಖ್ಯಾನ, ಗೌತಮ ವಿಜಯ, ಮೃಗಾವತಿ ಪರಿಣಯ, ಸಾಹಸಾಂಬ ಎಂಬ ನಾಲ್ಕು ಯಕ್ಷಗಾನ ಪ್ರಸಂಗಗಳನ್ನು ಬರೆದರು.ಇದನ್ನು ಓದಿದ ಕೂಡ್ಲು ಎರೆಯಪ್ಪಾಡಿ ಕೇಶವ ಶ್ಯಾನ್‌ಭೋಗರ ಒತ್ತಾಸೆಯೇ 'ಶ್ವೇತ ಕುಮಾರ ಚರಿತೆ' ಬರೆಯಲು ಕಾರಣ.ಈ ಪ್ರಸಂಗವನ್ನು ಮೊದಲಿಗೆ ರಂಗಕ್ಕೆ ತಂದವರು ಕರ್ನಾಟಕ ಯಕ್ಷಗಾನ ಮೇಳದ ಸ್ಥಾಪಕರಾದ ಕಲ್ಲಾಡಿ ಕೊರಗ ಶೆಟ್ಟರು. ಆಮೇಲೆ ಎಲ್ಲಾ ಮೇಳದವರೂ ಈ ಪ್ರಸಂಗವನ್ನು ಪ್ರದರ್ಶಿಸಿದರು. ಇದು ಮಾಸ್ತರರಿಗೆ ಅಪಾರ ಕೀರ್ತಿಯನ್ನು ತಂದು ಕೊಟ್ಟಿತು.

ಕೀರಿಕ್ಕಾಡು ವಿಷ್ಣು ಭಟ್ಟರ ಪ್ರಸಂಗಗಳು ಸರಳವಾಗಿದ್ದು ಹಿತಮಿತ ವರ್ಣನೆಗಳಿಂದ ಅರ್ಥ ಗಾಂಭೀರ್ಯದಿಂದ ಕೂಡಿವೆ. ಬಹುತೇಕ ಪ್ರಸಂಗಗಳಲ್ಲಿ ಇನ್ನೂರು-ಇನ್ನೂರೈವತ್ತು ಪದ್ಯಗಳಿವೆ. ಕಂದ

ಭಾಮಿನಿಗಳನ್ನು ಸಮಯೋಚಿತವಾಗಿ ಬಳಸಿಕೊಂಡಿದ್ದಾರೆ. ಪ್ರಸಂಗದ ಏಕತಾನತೆಯನ್ನು ತಪ್ಪಿಸಲು ತಾಳಗಳಲ್ಲಿ ವ್ಯತ್ಯಾಸವನ್ನು ತಂದಿದ್ದಾರೆ. ಹೆಚ್ಚಿನ ಎಲ್ಲಾ ಪ್ರಸಂಗಗಳಲ್ಲೂ ಗೇಯತೆಯಿದೆ.

ರಕ್ಷಾಕವಚ ಪ್ರಸಂಗದ

'ಮೆಚ್ಚಿದೆ ಮೆಚ್ಚಿದೆ ಖಳನೇ' 'ವಂದಿಸುವೆನು ನಾಥಾ\ಕ್ಷೇಮದಿ\ ಬಂದಿರಲ್ಲ ಪ್ರೀತ',

ಭೀಮ ಶಂಕರ ಮಹಿಮೆಯ 'ನಿನ್ನದೇನು ಲೀಲೆ' ,

ಪಾಂಚಜನ್ಯದ 'ಇತ್ತ ಬಾರೆ ಪೇಳ್ವೆ ನೊಂದ ಮಾತು ಕೇಳು',

ಸೀತಾ ಪರಿತ್ಯಾಗದ 'ಕೇಳಿನ್ನ ಮನದನ್ನೆ/ಬಾಲೆ ಭೂಜಾತೆ',

ಮೊದಲಾದ ಹಲವು ಪದ್ಯಗಳನ್ನು ಉತ್ತಮ ಗೇಯ ರಚನೆಗಳಿಗೆ ಉದಾಹರಣೆಯಾಗಿ ನೀಡಬಹುದಾಗಿದೆ.

ಪ್ರಸಂಗ ಸಾಹಿತ್ಯವು ಸಂಭಾಷಣೆ ಮತ್ತು ಕುಣಿತಕ್ಕೆ, ಹಾಡುಗಾರಿಕೆ ಮತ್ತು ಕವಿತಾ ರಚನಾ ಸಾಮರ್ಥ್ಯದ ಪ್ರದರ್ಶನ ಮಾಡಿದರೆ ಸಾಲದು.ಬಹುಮುಖೀ ಅವಕಾಶಗಳಿಗೆ ಆಸ್ಪದವಿರಬೇಕಾದುದರಿಂದ ಪ್ರಸಂಗಕರ್ತನಿಗೆ ದೊಡ್ಡ ಸವಾಲಿದೆ. ಕೀರಿಕ್ಕಾಡು ಮಾಸ್ತರರ ಪ್ರಸಂಗಗಳು ನರ್ತಕ, ಹಿಮ್ಮೇಳಗಾರ ಮತ್ತು ಅರ್ಥಗಾರನನ್ನು ಒಳಗೊಂಡು ರೋಚಕ ಪರಿಣಾಮ ಬೀರುವಂತೆ ಸಿದ್ಧಗೊಂಡಿದೆ.

ಇವರ ಪ್ರಸಂಗಗಳಲ್ಲಿ ಪಾತ್ರೋಚಿತ ಸಂಭಾಷಣೆಗಳಿವೆ.ರಂಗಸ್ಥಳದಲ್ಲಿ ಎರಡೋ, ಮೂರೋ, ಪಾತ್ರಗಳು ಬಂದಾಗ ಸಂಭಾಷಣೆಯ ವಿಶಿಷ್ಟತೆಗೆ ಅನುಗುಣವಾಗಿ ವಿಭಿನ್ನ ಬಗೆಯ ಹಾಡುಗಳನ್ನು

ರಚಿಸಿರುವುದು ಮಾಸ್ತರರ ಮಹತ್ತು.ಇಲ್ಲಿ ನಾಟಕ ಮತ್ತು ಗೀತ ನಾಟಕದ ಲಕ್ಷಣಗಳನ್ನು ಅಳವಡಿಸುವ ಪ್ರಯತ್ನವನ್ನು ಮಾಸ್ತರರು ಅಳವಡಿಸಿಕೊಳ್ಳುವ ಪ್ರಯತ್ನವನ್ನು ಮಾಡಿಕೊಂಡಿದ್ದಾರೆ.

ಇದಕ್ಕೆ ಶ್ವೇತಕುಮಾರ ಚರಿತೆಯ 'ದೇವಾದಿ ದೇವರ ದೇವ ಶಂಕರನೇ',

ಬ್ರಹ್ಮಯಜ್ಞದ ಬಿನ್ನೈಸುವೆನು ಪದ\ಸನ್ನಿಧಿಯೊಳಗಿದ\ಅಮ್ಮ ಕೇಳು',

ದುರ್ಗಾಮಹಿಮೆಯ 'ಆಕೆಯು ಮುನಿದೆದ್ದು\ಮುಂಬರೆ\ನಾ ಖತಿಗೊಳದಿದ್ದು',

ರತ್ನಹಾರದ 'ಏನು ಬಂದೆ ಮಗಳೇ\ಎನ್ನಬಿ\ಮಾನಕುಸುಮ ಮುಗುಳೇ' ಮೊದಲಾದ ಹಲವು ಉದಾಹರಣೆಗಳನ್ನು ನೀಡಬಹುದಾಗಿದೆ.

ಕೀರಿಕ್ಕಾಡು ಮಾಸ್ತರರ ಯಕ್ಷಗಾನ ಪದ್ಯಗಳು ಸರಳತೆಯಿಂದ ಕೂಡಿವೆ.ಮುದ್ದಣ ಕವಿಯ ಪ್ರಸಂಗಗಳಂತೆ ಕ್ಲಿಷ್ಟವಾಗಿರದೆ ಸುಲಭಗ್ರಾಹ್ಯವಾಗಿವೆ. ಈ ದೃಷ್ಟಿಯಿಂದ ಗಮನಿಸುವುದಾದರೆ ಮಾಸ್ತರರಿಗೆ

ಪಾರ್ತಿಸುಬ್ಬ ಮಾರ್ಗದರ್ಶಿ.ಮೃದು ಮಧುರ ಪದ ಜೋಡಣೆಯಿಂದ ಪದ್ಯಗಳಲ್ಲಿ ಉತ್ತಮ ಪದಮೈತ್ರಿ ಸಾಧಿಸಿದ್ದು ಜನಸಾಮಾನ್ಯರ ಬಾಯಲ್ಲೂ ಸರಾಗವಾಗಿ ಇವರ ಪ್ರಸಂಗ ಪದ್ಯಗಳು ಕುಣಿದಾಡುತ್ತಿವೆ.

ಮಾಸ್ತರರ ಕವಿ ಪ್ರತಿಭೆ ಅನೇಕ ಪ್ರಸಂಗಗಳನ್ನು ಧ್ವನಿಪೂರ್ಣವೂ ರಸಾತ್ಮಕವೂ ಆಗಿಸಿದೆ.ವೀರ ಶೃಂಗಾರ ರಸಗಳಿಗೆ ಅವರು ವಿಶೇಷ ಒತ್ತು ನೀಡಿದ್ದಾರೆ.ಯಮಕ, ಅನುಪ್ರಾಸ, ಶ್ಲೇಷೆ, ರೂಪಕ, ಉಪಮೆ ಮೊದಲಾದ ಅಲಂಕಾರಗಳನ್ನು ಹೇರಳವಾಗಿ ಬಳಸಿಕೊಂಡಿದ್ದಾರೆ.

ಸೀತಾ ಪರಿತ್ಯಾಗ ಪ್ರಸಂಗದ 'ಅಂಬು ವದನೆ ಶೋಭಿಪನೇತ್ರೆ',

ಅಂಬಿಕಾ ಮಹಾತ್ಮೆಯ 'ಕನ್ನಡಿಯಂತೆ ಶೋಭಿಪ ಕೆನ್ನೆ',

ಬ್ರಹ್ಮಯಜ್ಞ ಪ್ರಸಂಗದ 'ಚಂದ್ರವದನೆ\ಕುಂದರದನೆ\ಚಂದದರಗಿಣಿ',

ಹರಿರತ್ನಹಾರ ಪ್ರಸಂಗದ 'ಕಂಬು ಕಂಠಿನಿ ಮುಗುಳಂಬನಗಿಣಿಯು'

ರಕ್ಷಾಕವಚದ 'ಮೋಹಿನಿ\ಇವಳೆ ತ್ರೈಲೋಕ ಸಂ\ಮೋಹಿನಿ ಮೋಹಿನಿ ಇವಳೇ ನಿಶ್ಚಯವು' ಇಂತಹ ಹಲವು ಪದ್ಯಗಳನ್ನು ಮಾಸ್ತರರ ಕಾವ್ಯಾತ್ಮಕ ಶೈಲಿಗೆ ಉದಾಹರಣೆಯಾಗಿ ನೀಡಬಹುದು.

ಪ್ರಸಂಗ ರಚನೆಯಲ್ಲಿ ಮಾಸ್ತರರು ಎತ್ತಿದ ಕೈ. ಸ್ವತಃ ಅನೇಕ ಯಕ್ಷಗಾನ ತಾಳಮದ್ದಲೆಗಳಲ್ಲಿ ಅರ್ಥಧಾರಿಯಾಗಿ ಪಡೆದ ಅನುಭವ ಸೂಕ್ಷ್ಮಗಳನ್ನು ಅವರು ಇಲ್ಲಿ ಬಳಸಿಕೊಂಡಿದ್ದಾರೆ. ಸಂದರ್ಭ, ಸನ್ನಿವೇಶಗಳಿಗೆ ಅನುಗುಣವಾಗುವ ಕಾವ್ಯಬಂಧ ಮತ್ತು ತಾಳಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ.

ಪ್ರಸಂಗದ ಪ್ರಾರಂಭದಲ್ಲಿ ಸೌರಾಷ್ಟ್ರ,ತ್ರಿವುಡೆ,ನಾಟಿ,ಝಂಪೆ ತಾಳಗಳನ್ನು ಬಳಸಿಕೊಂಡಿದ್ದಾರೆ. ಚಾರಕನ ಪದಕ್ಕೆ ಮುಖಾರಿ ಏಕತಾಳವನ್ನು ಬಳಸಿಕೊಂಡು ಹಾಸ್ಯಚಲನೆಗೆ ಸೂಕ್ತವಾಗುವಂತೆ ಮಾಡಿದ್ದಾರೆ.ಬೇಗಡೆ ಆದಿತಾಳವನ್ನು ಕರುಣರಸಕ್ಕೂ,ಸಾಂಗತ್ಯವನ್ನು ನಾರದ ಪ್ರವೇಶಕ್ಕೂ,ವಿಷ್ಣುವಿನ ಮಾತಿಗೆ ಅಷ್ಟತಾಳವನ್ನೂ,ತ್ರಿಲೋಕ ಸುಂದರಿಯನ್ನು ಮಾತನಾಡಿಸುವಾಗ ಕೇದಾರ ಗೌಳ ಝಂಪೆಯನ್ನೂ, ರಾಕ್ಷಸಿಯ ಆರ್ಭಟಕ್ಕೆ ತಕ್ಕುದಾದ ಮುಖಾರಿ ಅಷ್ಟತಾಳವನ್ನೂ,ಬೇಟೆಯ ಸಂದರ್ಭದಲ್ಲಿ ಸಾರಂಗ ಏಕತಾಳವನ್ನೂ,ಅಪ್ಸರಾ ನರ್ತನಕ್ಕೆ ಬೇಗಡೆ ಆದಿತಾಳವನ್ನು ಬಳಸಿಕೊಂಡಿರುವುದು ಅವರ ಅನನ್ಯ ತಾಳಜ್ಞಾನಕ್ಕೆ ಸಾಕ್ಷಿ ನುಡಿಯುತ್ತವೆ.

ಕಥೆಯ ಪೀಠಿಕೆಯ ಪದಗಳನ್ನು ಭೈರವಿ ಝಂಪೆ,ನಾಟಿ ಝಂಪೆ,ನಾಟಿ ತ್ರಿವುಡೆ,ಸೌರಾಷ್ಟ್ರ ತ್ರಿವುಡೆಗಳಲ್ಲಿ ಆರಂಭಿಸಿ ಪರಂಪರೆಯನ್ನು ಗೌರವಿಸಿದ್ದಾರೆ.ಕಥೆಯ ಭಾವ ಸನ್ನಿವೇಶಗಳಿಗೆ

ಅನುಗುಣವಾಗುವಂತೆ ರಾಗ ತಾಳಗಳನ್ನು ಆರಿಸಿಕೊಂಡುದರಿಂದಲೇ ಅವರ ಪ್ರಸಂಗಗಳು ರಂಗದಲ್ಲಿ ಅದ್ಭುತ ಯಶಸ್ಸನ್ನು ಪಡೆಯಲು ಸಾಧ್ಯವಾಯಿತು.

ಮಾಸ್ತರರ ಪ್ರಸಂಗಗಳು ತಾಳಮದ್ದಲೆಗಿಂತ ಬಯಲಾಟಗಳಿಗೇ ಹೆಚ್ಚು ಸೂಕ್ತವಾಗಿದೆ.ಅವರ ಪ್ರಸಂಗಗಳ ರಂಗಶಿಲ್ಪ ಪ್ರಯೋಗಕ್ಕೆ ಒಗ್ಗುವಂತಿದೆ.ಅಲ್ಲಿ ವೈಚಾರಿಕ ಜಿಜ್ಞಾಸೆಗೆ,ವಾದ,ತರ್ಕಗಳಿಗೆ ಅಷ್ಟು ಅವಕಾಶವಿಲ್ಲ.ತಾಳಮದ್ದಲೆಗಳಲ್ಲಿ ಮಾತುಗಾರಿಕೆಯೇ ಪ್ರಧಾನವಾದುದರಿಂದ ಜಿಜ್ಞಾಸೆಗೆ ಪ್ರಾಧಾನ್ಯ.ಆದರೆ ರಂಗ ಪ್ರದರ್ಶನಗಳಿಗೆ ಯೋಗ್ಯವಾಗುವ ಘಟನಾ ಸರಣಿಗಳನ್ನು ಮುನ್ನಡೆಸುವ ಕ್ರಮ ಮಾಸ್ತರರ ಪ್ರಸಂಗಗಳಲ್ಲಿದೆ.ಪಾತ್ರಗಳ ಬರುವಿಕೆ,ನಿರ್ಗಮನ,ಕುಣಿತಗಳಿಗೆ ಹೊಂದಿಕೆಯಾಗುವ ಪದ್ಯಗಳನ್ನು ರಚನೆ ಮಾಡಿರುವುದರಿಂದ ರಸಭಾವ ಪ್ರಕಟಣೆಗೆ ಹೆಚ್ಚು ಅವಕಾಶ ದೊರಕಿದೆ.

## ಪ್ರಸಂಗಗಳಿಗೆ ಅರ್ಥವಿವರಣೆ

ಕೀರಿಕ್ಕಾಡು ವಿಷ್ಣು ಮಾಸ್ತರರು ಕೆಲವು ಪ್ರಸಂಗಗಳಿಗೆ ಅರ್ಥವಿವರಣೆ ನೀಡಿದ್ದಾರೆ. ಪ್ರಸಂಗಗಳಿಗೆ ಅರ್ಥವಿವರಣೆ ಸುಲಭ ಸಾಧ್ಯವಾದ ಕಾರ್ಯವಲ್ಲ. ಯಾಕೆಂದರೆ ಅದು ಅನುವಾದ ಕಾರ್ಯವಲ್ಲ. ಪದ್ಯಕ್ಕಿಂತ ಅರ್ಥ ಸಣ್ಣದಾದರೆ ಪಾತ್ರದ ಭಾವಗಳನ್ನು ಸೂಕ್ತವಾಗಿ ತೆರೆದಿಡಲು ಅಸಾಧ್ಯ. ಶೋಕ ಮತ್ತು ಶಾಂತಭಾವಗಳನ್ನು ಪ್ರಕಟಪಡಿಸಲು ಅರ್ಥವು ಮೃದು, ಸರಳ ಅಕ್ಷರಗಳನ್ನು ಹೊಂದಿರಬೇಕು.ದೀರ್ಘ ವಾಕ್ಯಗಳಿಂದ ಕೂಡಿರಬೇಕು.

ವೀರರಸದಲ್ಲಿ ಪರುಷಾಕ್ಷರಗಳ ಪ್ರಯೋಗ, ಸಂಸ್ಕೃತ ಪದಗಳ ಬಳಕೆ,ಕಠಿಣ ಶಬ್ದ,ಸಣ್ಣ ವಾಕ್ಯ ಬೇಕು. ಆಗ ಮಾತ್ರ ರಸಾಸ್ವಾದನೆ ಸಾಧ್ಯ.ಮಾಸ್ತರರ ಪ್ರಸಂಗದ ಅರ್ಥವಿವರಣೆಯಲ್ಲಿ ಈ ಪ್ರಜ್ಞೆಯಿದೆ.

ಮಾಸ್ತರರು ಸೀತಾಪಹಾರ, ಜರಾಸಂಧ ವಧೆ, ಭಕ್ತಪ್ರಹ್ಲಾದ, ಅಂಗದ ಸಂಧಾನ,ವೀರ ಅಭಿಮನ್ಯು, ಪಂಚವಟಿ, ರಕ್ತಾಕವಚ,ಕುಮಾರ ವಿಜಯ,ವಿಭೀಷಣ ನೀತಿ,ಶ್ರೀರಾಮ ಪಟ್ಟಾಭಿಷೇಕ ಎಂಬ ಪ್ರಸಂಗಗಳಿಗೆ ಅರ್ಥ ಬರೆದಿದ್ದಾರೆ. ಇದು ಯಕ್ಷಗಾನ ಕ್ಷೇತ್ರಕ್ಕೆ ಪ್ರವೇಶ ಮಾಡುವ ಯುವ ಕಲಾವಿದರಿಗೆ ಮಾರ್ಗದರ್ಶಿ ರೂಪದಲ್ಲಿದೆ. ಅವರು ಜರಾಸಂಧ ವಧೆ, ಖರಾಸುರ ವಧೆ,ಕರ್ಣಾವಸಾನ ,ತುಳಸೀ ಶಂಖಚೂಡ ,ರಕ್ತಾಕವಚ ಮತ್ತು ಕುಮಾರ ವಿಜಯವೆಂಬ ಪ್ರಸಂಗವನ್ನು ಮೂರು ಗಂಟೆಯ ಕಾಲಾವಧಿಗೆ ಅಳವಡಿಸಿ ಅರ್ಥವಿವರಣೆಯನ್ನು (ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿರಿಸಿಕೊಂಡು) ನೀಡಿದ್ದಾರೆ. ಇದು ಶಾಲೆಗಳ ವಾರ್ಷಿಕೋತ್ಸವದಲ್ಲಿ ಪ್ರದರ್ಶನಗೊಂಡಿವೆ. ಆ ಕಾಲದಲ್ಲಿಯೇ ಮಾಸ್ತರರು ಕಾಲಮಿತಿಗೊಳಪಟ್ಟ ಯಕ್ಷಗಾನದ ಅಗತ್ಯವನ್ನು ಮನಗಂಡಿದ್ದರು ಎಂಬುದಕ್ಕೆ ಈ ಪ್ರಸಂಗಗಳೇ ಸಾಕ್ಷಿ

ಕೀರಿಕ್ಕಾಡು ಮಾಸ್ತರರ ಅರ್ಥವಿವರಣೆಯಲ್ಲಿ ಶ್ರೀರಾಮ ಪಟ್ಟಾಭಿಷೇಕದ ಅರ್ಥವಿವರಣೆ ಅತ್ಯಂತ ಜನಪ್ರಿಯವೂ, ವಿದ್ವಜ್ಜನರ ಪ್ರಶಂಸೆಗೂ ಪಾತ್ರವಾಗಿದೆ.ಇದು ಗದ್ಯಕಾವ್ಯದಂತಿದೆ. ಪಾರ್ತಿಸುಬ್ಬನ ಪ್ರಸಂಗಕ್ಕೆ ಕೀರಿಕ್ಕಾಡು ಅವರ ಅರ್ಥವಿವರಣೆಯಿದು.ಶ್ರೀರಾಮನ ಧೀರೋದಾತ್ತ ಚಿತ್ರಣ, ಕೈಕೇಯಿಯ ಹಠ,ದಶರಥನ ಇಬ್ಬಂದಿತನ,ಭರತನ ಬಂಧುಪ್ರೇಮ, ಕೌಸಲ್ಯೆಯ ಮಾತೃ ಹೃದಯ,ಲಕ್ಷ್ಮಣನ ದುಡುಕು,ಮಂಥರೆಯ ಚಾಡಿ ಇತ್ಯಾದಿಗಳನ್ನು ಮನೋಜ್ಞವಾಗಿ ವಿವರಿಸಿದ್ದಾರೆ.

ಪ್ರಸಂಗದ ಮುಖ್ಯ ಪದ್ಯಗಳಾದ 'ಬಂದೆಯಾ ಇನವಂಶವಾರಿಧಿ',ಕಣ್ಣ ನೀರಾಬ್ಧಿ', 'ಕಂಬು ಕಂಠಿನಿ', 'ಏನು ಬುದ್ಧಿ ನೆನೆದೆಯಯ್ಯೋ' ಇತ್ಯಾದಿಗಳಿಗೆ ಬರೆದ ಅರ್ಥ ಒಳನೋಟಗಳನ್ನು ಒಳಗೊಂಡು ಪ್ರಬುದ್ಧವಾಗಿದೆ.

ಅರ್ಥಸಾಹಿತ್ಯವನ್ನು ಒಂದು ಸಾಹಿತ್ಯ ಪ್ರಕಾರವೆಂದು ಪರಿಗಣಿಸಬೇಕೆಂಬುದು ಮಾಸ್ತರರ ಆಶಯವಾಗಿತ್ತು.ಈ ಕುರಿತು ಅವರು ಯಕ್ಷರಸಜೀವನದಲ್ಲಿ ಕೆಲವು ಮಾತುಗಳನ್ನಾಡಿದ್ದಾರೆ. ಭಾವ, ಭಾಷೆ, ಧ್ವನಿ, ಮನೋಧರ್ಮ ಇವು ಅರ್ಥಗಾರಿಕೆಯ ಮುಖ್ಯ ಅಂಶಗಳು.ಒಬ್ಬರು ಹೇಳಿದ ಅರ್ಥ ಇನ್ನೊಬ್ಬ ಬೇರೆ ಪ್ರಯೋಗದಲ್ಲಿ ಹೇಳಿದರೂ ಪರಿಣಾಮದ ತೀವ್ರತೆ ಕಡಿಮೆ.ಹಾಗಾಗಿ ಯಕ್ಷಗಾನದ ಆಶು ಅರ್ಥಗಾರಿಕೆಯು ಕಲಾವಿದನ ಪುರಾಣ ಜ್ಞಾನ,ಭಾಷಾ ಪ್ರೌಢಿಮೆ,ಧ್ವನಿಯ ಬಳಕೆ,ಪ್ರತ್ಯುತ್ಪನ್ನಮತಿತ್ವದಿಂದ ಸ್ವಾಂತತೆ ಸಾಧ್ಯವಾಗುತ್ತದೆ.ಆದ್ದರಿಂದ ಯಕ್ಷಗಾನದಲ್ಲಿ ಅರ್ಥಸಹಿತ ಪ್ರಸಂಗಗಳು ರಚನೆಗೊಂಡದ್ದೇ ಕಡಿಮೆ.

ಆದರೆ ಕೀರಿಕ್ಕಾಡು ಮಾಸ್ತರರ ಈ ಅಪರೂಪದ ಕೃತಿ ಈ ಎಲ್ಲ ಮಿತಿಗಳ ನಡುವೆಯು ವಿಶಿಷ್ಟವಾಗಿ ಮೂಡಿದೆ. ಒಂದು ನಾಟಕ, ರೂಪಕದ ಅನುಭವವನ್ನೂ ನೀಡುತ್ತದೆ.ಕಥೆಯನ್ನು ಓದುವುದಕ್ಕಿಂತ ಪಾತ್ರಗಳೇ ಎದ್ದು ಮಾತಾಡಿ ಕಥೆಯನ್ನು ಜೋಡಿಸುವುದು ಅರ್ಥಗಾರಿಕೆ ವೈಶಿಷ್ಟ್ಯ.ಅದಕ್ಕೆ ಅನುಗುಣವಾಗುವಂತೆ ಮಾಸ್ತರರ ಈ ಅರ್ಥವಿವರಣೆಯಿದೆ.

ಕರ್ಣಾರ್ಜುನ ಪ್ರಸಂಗದಲ್ಲಿ ಅವರು ಬರೆದ ಕರ್ಣನ ಪಾತ್ರದ ಅರ್ಥವನ್ನು ರುಚಿಗಾಗಿ ಗಮನಿಸಬಹುದು.ಕರ್ಣಾವಸಾನದ ಭಾಗ "ಹಾ। ಕೌರವೇಶ್ವರ ಒಂದೊಂದೇ ಗುಣಗಳನ್ನು ಎಣಿಸುತ್ತಾ ಹೋದ ಹೋದಂತೆ ಧೀರತ್ವವೇ ಮೂರ್ತಿವೆತ್ತಂಥಾ ನನ್ನ ಹೃದಯವೂ ಕರಗಿ ಕಣ್ಣೀರಾಗಿ ಹರಿಯುತ್ತಿದೆ. ಆ ವಾತ್ಸಲ್ಯ ನಿಧಿಯ ಸೇವಾ ತತ್ಪರತೆಯಲ್ಲಿ ಮಡಿಯುವಂತಾದರೆ ಅದೂ ಒಂದು ಪುಣ್ಯವೇ.ಭಗವಂತನಾದ ವಾಸುದೇವನು ಸತ್ಯಸದ್ಧರ್ಮ ಪಕ್ಷಪಾತಿಯು.ಸ್ವಾಮಿ ಸೇವೆಗಾಗಿ ಶರೀರ ಸಮರ್ಪಣೆ ಮಾಡುವುದು ಉತ್ತಮ ಧರ್ಮವೇ ಇರುವಾಗ ಅದಕ್ಕಾಗಿಯೇ ಸಿದ್ಧನಾದ ನನಗೆ ನನ್ನ ಅಂತ್ಯಕಾಲದಲ್ಲಿ ಆರಮಣೀಯ

ಸುಂದರಮೂರ್ತಿಯೂ ಕರುಣಾಮಯನೂ ಆದ ಜನಾರ್ಧನನು ಅದೇಕೆ ಮೆಚ್ಚಲಾರ? ಈ ನರನ ಸಾರಥಿಯಾಗಿದ್ದರೂ ಸಾಕ್ಷಾತ್ ವಿಶ್ವಂಭರನೇ ಅವನು. ಅಂತಹ ನೀರದ ಕೋಮಲ ಗತ್ರನನ್ನು ನಿಶ್ಚಲ ಮನಸ್ಸಿನಿಂದ ಕಣ್ತುಂಬಾ ನೋಡುತ್ತಾ ಆನಂದಿಸಬೇಕಾಗಿದೆ. ಇವನ ದರ್ಶನಕ್ಕಾಗಿಯೇ ಅಲ್ಲವೇ ದೇವಾದಿ ದೇವತೆಗಳು,ಮುನಿಗಳು ನಿರಂತರವೂ ಪ್ರಯತ್ನಿಸುವುದು.?ವೇದಾಗಮಗಳಿಗೆ ಸಿಲುಕದ ಪರಾತ್ಪರ ವಸ್ತುವಿನ ಯಥಾರ್ಥತೆಯನ್ನು ಕಂಡ ಮೇಲೆ ಮೋಕ್ಷವಲ್ಲದೇ ಮತ್ತೇನು! ಭಾಗ್ಯವೇ ಅಲ್ಲವೇ! ಹೌದು ಭಾಗ್ಯವೇ ಭಾಗ್ಯ!! ಪಾದಾಗುಂಟದಿಂದ ಪರಮ ಪಾವನೆಯಾದ ಭಾಗೀರಥಿಯನ್ನೇ ಪಡೆದು ಪ್ರಪಂಚಕ್ಕೆ ನೀಡಿದ ಪರಮಾತ್ಮನೇ ಪ್ರಸನ್ನನಾಗಅ! ನಿನ್ನ ವಿಶ್ವಾತೀತ ದಿವ್ಯರೂಪವನ್ನು ಕಂಡು ಧನ್ಯನಾಗುತ್ತೇನೆ. ಸ್ವಾಮಿ ಕೃಷ್ಣ! ಕೃಷ್ಣ!! ಕೃಷ್ಣ!!!''

ಈ ಕೃತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ 'ಇದು ಆ ಕಾಲದ ತಾಳಮದ್ದಲೆಯ ಸ್ವರೂಪವನ್ನು ತೆರೆದಿಡುತ್ತದೆ.ಪ್ರಸಂಗದ ಆರಂಭದಲ್ಲಿ ದಶರಥನ ದೀರ್ಘವಾದ ಐದು ಸ್ವಗತಗಳು ಆ ಕಾಲದ ಯಕ್ಷಗಾನದ ಶೈಅ ಎನಿಸುತ್ತದೆ'[೪] .ಅಷ್ಟು ದೀರ್ಘವಾದ ವಿವರಣೆಯಿಂದ ಪಾತ್ರಗಳನ್ನು ಕಟ್ಟುವ ಕಲೆಯದು. ಅದಕ್ಕನುಗುಣವಾಗುವಂತೆ ಸುದೀರ್ಘ ಅರ್ಥವನ್ನು ಮಾಸ್ತರರು ಬರೆದಿದ್ದಾರೆ.ಮಂತ್ರಿ ಸುಮಂತ್ರನನ್ನು ಕರೆದು ಆರಂಭದಲ್ಲಿಯೇ ಸಂಭಾಷಣಾ ತಂತ್ರದ ಮೂಲಕ ದಶರಥನ ಪಾತ್ರವನ್ನು ಕಟ್ಟಬಹುದಾಗಿತ್ತು. ಮಾಸ್ತರರು ಹಾಗೆ ಮಾಡದಿರುವುದಕ್ಕೆ ಆಗಿನ ತಾಳಮದ್ದಲೆಯ ಕ್ರಮವನ್ನು ಅನುಸರಿಸಿದ್ದೇ ಕಾರಣವಿರಬೇಕು.

ಪ್ರಸಂಗದಲ್ಲೂ ಅರ್ಥದಲ್ಲೂ ಉಪಮೆ,ಅಲಂಕಾರ ಇತ್ಯಾದಿಗಳ ಅನವಶ್ಯಕ ಬಳಕೆ ಬಂದಿದೆ. ಉದಾಹರಣೆಗೆ ಕೈಕೇಯಿಯ ಅಂತ:ಪುರವನ್ನು ದಶರಥ,ಲಕ್ಷ್ಮಣ ಮುಂತಾದವರು ವರ್ಣಿಸುವುದು ಅಪ್ರಸ್ತುತವೆನಿಸುತ್ತದೆ.ಅದೇ ರೀತಿ ಹೆಣ್ಣಿನ ದೈಹಿಕ ಲಕ್ಷಣಗಳ ರೂಪಗಳ ವಿಸ್ತಾರ ವರ್ಣನೆ ಬಂದಿದೆ. ಇವೆಲ್ಲ ಅಂದಿನ ತಾಳಮದ್ದಲೆಯಲ್ಲಿ ಸಹಜವಿದ್ದು ಸಂಪ್ರದಾಯವನ್ನು ಮುರಿಯಲಚ್ಚಿಸದೇ ಮಾಸ್ತರರು ಹೀಗೆ ಮಾಡಿದ್ದಿರಬೇಕು.ಇವೆಲ್ಲವನ್ನೂ ಗಮನಿಸಿದರೆ ಹಿಂದಿನ ತಾಳಮದ್ದಲೆಯ ಸ್ವರೂಪವನ್ನು ತಿಳಿಯಬಹುದಾಗಿದೆ.

ಅರ್ಥ ಬರೆವವನಿಗೆ ಸ್ವಾತಂತ್ರ್ಯ ಕಡಿಮೆ.ಮೂಲ ಪ್ರಸಂಗವನ್ನು ಬಿಟ್ಟು ಆತ ಮುಂಬರಿವಂತಿಲ್ಲ. ಸೃಜನಶೀಲತೆಗೆ ಅವಕಾಶ ಕಡಿಮೆ. ಇವೆಲ್ಲದರ ನಡುವೆಯೂ ಸಾಧ್ಯವಿದ್ದಲ್ಲೆಲ್ಲ ಸಂಭಾಷಣೆ ಒಳನೋಟದ ಮಾತುಗಳ ಮೂಲಕ ಮಾಸ್ತರರು ಸೋಪಜ್ಞತೆ ಮೆರೆದಿದ್ದಾರೆ.ಯಕ್ಷಗಾನ ಅರ್ಥವಿವರಣೆಯಲ್ಲಿ ಮಾದರಿಯಂತಿರುವ ಈ ಕೃತಿ ಯಕ್ಷಗಾನ ಕಲಾಭ್ಯಾಸಿಗಳಿಗೆ ಉಪಯುಕ್ತ ಅಧ್ಯಯನ ಯೋಗ್ಯ ಪುಸ್ತಕವಾಗಿದೆ.

## ಸಂದರ್ಭಸೂಚಿ


೧. ಡಾ.ಡಿ.ಕೆ.ರಾಜೇಂದ್ರ : ದಕ್ಷಿಣ ಕರ್ನಾಟಕದ ಜನಪದ ರಂಗಭೂಮಿ ಪು.ಸಂ.೨೭

೨. ಗೋಪಾಲಕೃಷ್ಣ ಶಾಸ್ತ್ರಿ ಮೂಡಂಬೈಲು ಅಗ್ರಮಾನ್ಯ ಯಕ್ಷಗಾನ ಕವಿ– ಯಕ್ಷರಸ ಚೇತನ ಪು. ಸಂ. ೪೨.

೩. ಡಾ.ಉಪ್ಪಂಗಳ ಶಂಕರನಾರಾಯಣ ಭಟ್: ಕೀರಿಕ್ಕಾಡು ಮಾಸ್ತರರ ಯಕ್ಷಗಾನ ಪ್ರಸಂಗಗಳು ವಜ್ರಪತ್ರ ಪು.ಸಂ.೧೯

೪. ಗೋಪಾಲಕೃಷ್ಣ ಶಾಸ್ತ್ರಿ ಮೂಡಂಬೈಲು ಅಗ್ರಮಾನ್ಯ ಯಕ್ಷಗಾನ ಕವಿ – ಯಕ್ಷರಸ ಚೇತನ ಪು. ಸಂ. ೪೩

# ಅಧ್ಯಾಯ ನಾಲ್ಕು

## ಕೀರಿಕ್ಕಾಡು ವಿಷ್ಣು ಮಾಸ್ತರರ

## ಪೌರಾಣಿಕ, ಐತಿಹಾಸಿಕ ಮತ್ತು ಇತರೆ ಪ್ರಸಂಗಗಳು

## ವಸ್ತು,ಪ್ರೇರಣೆ ಮತ್ತು ಸ್ವೋಪಜ್ಞತೆ

೪.೧ ಪೌರಾಣಿಕ,ಐತಿಹಾಸಿಕ ಯಕ್ಷಗಾನ ಪ್ರಸಂಗಗಳ ವಸ್ತು ವಿಚಾರ

೪.೨ ಕೀರಿಕ್ಕಾಡು ಮಾಸ್ತರರ ಪೌರಾಣಿಕ ಪ್ರಸಂಗಗಳು

೪.೩ ಮಾಸ್ತರರ ಅಪ್ರಕಟಿತ ಪೌರಾಣಿಕ ಪ್ರಸಂಗಗಳು

೪.೪ ಕೀರಿಕ್ಕಾಡು ಮಾಸ್ತರರ ಪ್ರಾತಿನಿಧಿಕ ಪೌರಾಣಿಕ ಪ್ರಸಂಗ

'ಶ್ವೇತ ಕುಮಾರ ಚರಿತ್ರೆ'

೪.೫ ಕೀರಿಕ್ಕಾಡು ಮಾಸ್ತರರ ಐತಿಹಾಸಿಕ ಮತ್ತು ಇತರೆ ಪ್ರಸಂಗಗಳು

# ಅಧ್ಯಾಯ ನಾಲ್ಕು

## ೪.೧ ಪೌರಾಣಿಕ,ಐತಿಹಾಸಿಕ ಯಕ್ಷಗಾನ ಪ್ರಸಂಗಗಳ ವಸ್ತು ವಿಚಾರ

ಯಕ್ಷಗಾನ ಜಗತ್ತಿನ ಶ್ರೇಷ್ಠ ಕಲಾಪ್ರಕಾರಗಳಲ್ಲಿ ಕಾಣಿಸಿಕೊಳ್ಳಬೇಕಾದ ಯೋಗ್ಯತೆಯನ್ನು ಹೊಂದಿದೆ. ಸಾತ್ವಿಕ,ಆಂಗಿಕ,ಆಹಾರ್ಯ, ವಾಚಿಕಗಳೆಂಬ ನಾಲ್ಕು ಬಗೆಗಳನ್ನೂ ಒಳಗೊಳ್ಳುವ ವಿಶಿಷ್ಟತೆ ಇದರದು.ಇಲ್ಲಿ ಹಿಮ್ಮೇಳ ಮತ್ತು ಮುಮ್ಮೇಳದ ಎಲ್ಲರೂ ಸಮಾನರೇ ಆದರೂ ಭಾಗವತರು ಒಟ್ಟು ಪ್ರಯೋಗದ ಸೂತ್ರಧಾರ. ಯಕ್ಷಗಾನ ಪ್ರಸಂಗಗಳು ಪ್ರದರ್ಶನದ ಸೂತ್ರ. ಇಡೀ ಪ್ರದರ್ಶನವನ್ನು ನಿಯಂತ್ರಿಸುವ ಜೀವ ದ್ರವ್ಯ.

ಯಕ್ಷಗಾನದಲ್ಲಿ ನಡೆದ ಮೊದಲ ಪ್ರಯೋಗ ಯಾವುದು ಎಂಬ ಪ್ರಶ್ನೆಗೆ ಉತ್ತರಿಸುವುದು ಅಷ್ಟು ಸುಲಭದ ಮಾತಲ್ಲ. ಅದು ನಮ್ಮನ್ನು ಯಕ್ಷಗಾನದ ಮೂಲಕ್ಕೆ ಕೊಂಡೊಯ್ಯುತ್ತದೆ.ಸಂಸ್ಕೃತ ಭಾಷೆಯಲ್ಲಿ ರಚನೆಗೊಂಡ ಪುರಾಣಕಾವ್ಯಗಳು ಕನ್ನಡದಲ್ಲಿ ರಚನೆಗೊಂಡು ಬಂದಾವಾಗ ಆ ಕಥಾನಕಗಳನ್ನು ಜನರಿಗೆ ತಲುಪಿಸಲು ಮಾಡಿದ ಪ್ರಯತ್ನದ ಫಲವೇ ಯಕ್ಷಗಾನದ ಹುಟ್ಟಿಗೆ ಕಾರಣವಿರಬೇಕೆಂದು ತರ್ಕಿಸಲಾಗಿದೆ. ಅದೇ ಪ್ರಯತ್ನದ ಮುಂದುವರಿಕೆ ಯಕ್ಷಗಾನ ಪ್ರಸಂಗಗಳ ರಚನೆ. ಪೌರಾಣಿಕ ಕಥೆಗಳನ್ನು ಜನಸಾಮಾನ್ಯರಿಗೆ ಅರ್ಥವಾಗುವಂತೆ ಸರಳವಾಗಿ ಸಂವಹನ ಮಾಡುವ ಜನಾಭಿಮುಖ ಪ್ರಯೋಗ ಅದು.

ಓದುವ,ಹಾಡುವ ಕೃತಿಗಳಾಗಿ ರೂಪುಗೊಂಡ ಯಕ್ಷಗಾನ ಪ್ರಸಂಗಗಳನ್ನು ಸುತ್ತಲೂ ಇದ್ದ ಸಾಂಸ್ಕೃತಿಕ ಪ್ರಕಾರಗಳಿಂದ ಶಾಸ್ತ್ರೀಯ ಮತ್ತು ಇತರ ಮೂಲಗಳಿಂದ ವಿವಿಧ ಅಂಶಗಳನ್ನು ಸ್ವೀಕರಿಸಿ ಬೆಳೆಸಲಾಯಿತು.ಪ್ರಸಂಗವನ್ನು ಪ್ರದರ್ಶನ ರೂಪವಾಗಿ,ಪದಗಳನ್ನು ಆಟವಾಗಿ ರೂಪಿಸಿದ್ದು ಇಂತಹ ಸ್ವೀಕರಣಗಳೇ. ಹಾಡುಗಬ್ಬಗಳು, ಕಾವ್ಯಗಳು,ವಿವಿಧ ರೀತಿಯ ಪದ್ಯಗಳು ಪ್ರದರ್ಶನಯೋಗ್ಯವಾಗಿ ರೂಪುಗೊಂಡುದ್ದನ್ನು ಭಾರತದ ಪಾರಂಪರಿಕ ರಂಗಪ್ರಕ್ರಿಯೆಯಲ್ಲಿ ಕಾಣುತ್ತೇವೆ. ತೆಲುಗು, ತಮಿಳು, ಕೇರಳ,ಮಣಿಪುರಿ ಮೊದಲಾದೆಡೆ ಯಕ್ಷಗಾನದಂತಹುದೇ ಪ್ರಸಂಗ ಕಾವ್ಯಗಳದ್ದು ಆಯಾ ಪ್ರದೇಶದ ರಂಗಪ್ರಕಾರಗಳಿಗೆ ಆಧಾರವಾಗಿದೆ.

ಕನ್ನಡ ಕಾವ್ಯ ಪರಂಪರೆಯಲ್ಲಿ ಪಂಪನಿಂದ ತೊಡಗಿ ಮುಂದೆ ಬಂದ ಹೆಚ್ಚಿನ ಎಲ್ಲಾ ಕವಿಗಳು ತಮ್ಮ ಕಾವ್ಯಕ್ಕೆ ರಾಮಾಯಣ,ಮಹಾಭಾರತ,ಪುರಾಣಗಳ ವಸ್ತುಗಳನ್ನೇ ಬಳಸಿಕೊಂಡಿದ್ದಾರೆ.ಇದಕ್ಕೆ ಕಾರಣ ಎರಡು.ಒಂದು ಈಗಾಗಲೇ ಜನಮಾನಸದಲ್ಲಿ ಪರಿಚಿತವಾಗಿರುವ ಕಥಾನಕಗಳವು. ಇದರಿಂದ

ಕಾವ್ಯದ ಕಡೆಗೆ ಬೇಗನೇ ಸಹೃದಯರನ್ನು ಸೆಳೆದು ಬಿಡಬಲ್ಲೆವು ಎಂಬ ನಿಲುವು. ಇನ್ನೊಂದು ಮೌಲ್ಯಗಳನ್ನು ಸಮಾಜಕ್ಕೆ ಸರಳವಾಗಿ ಮತ್ತು ಆಕರ್ಷಕವಾಗಿ ತಲಪಿಸುವುದಕ್ಕೆ ಅತ್ಯಂತ ಯೋಗ್ಯವಾದ ಮಾರ್ಗ ಇದು.ಹಾಗೆಂದು ಈ ಕಾವ್ಯಗಳಾವುವು ಪುರಾಣಗಳ ಅನುವಾದಗಳಲ್ಲ.ಪುರಾಣದ ಭಿತ್ತಿಯಲ್ಲಿ ವರ್ತಮಾನದ ಬಿಂಬಗಳನ್ನು ಕವಿಗಳು ಮೂಡಿಸಿದ್ದಾರೆ.ಯಕ್ಷಗಾನದ ಕವಿಗಳು ಇದೇ ದಾರಿಯನ್ನು ತುಳಿದಿದ್ದಾರೆ.ಪ್ರಸಂಗದಲ್ಲಿ ಉಳಿದ ಕಾವ್ಯಗಳಷ್ಟು ಸೋಪಜ್ಞತೆ ಮೆರೆಯಲು ಅವಕಾಶ ಇಲ್ಲದಿದ್ದರೂ ಕಥೆಯ ಆಯ್ಕೆ, ನಿರೂಪಣೆಯ ಸಂದರ್ಭದಲ್ಲಿ ಸಾಕಷ್ಟು ಹೊಸತನವನ್ನು ತಂದಿದ್ದಾರೆ.

'ಯಕ್ಷಗಾನ ವಾಲ್ಮೀಕಿ' ಎಂದೇ ಹೆಸರಾದ ಕುಂಬಳೆಯ ಪಾರ್ತಿಸುಬ್ಬ ರಾಮಾಯಣದ ಕಥೆಗಳನ್ನು ಆಧರಿಸಿ ಬರೆದ ಯಕ್ಷಗಾನ ಪ್ರಸಂಗಗಳು ಬಹು ಜನಪ್ರಿಯ. ಬಹುಶಃ ಯಕ್ಷಗಾನ ಪ್ರಸಂಗಕರ್ತರು ಪುರಾಣ, ರಾಮಾಯಣ, ಮಹಾಭಾರತಗಳ ಕಡೆಗೆ ಮುಖ ಮಾಡಲು ಇದೂ ಒಂದು ಕಾರಣವಿರಬಹುದು.

ಯಕ್ಷಗಾನದ ರಂಗಶಿಲ್ಪವು ಪೌರಾಣಿಕ ಕಥಾವಸ್ತುವಿನ ಅಭಿವ್ಯಕ್ತಿಗೆ ಹೇಳಿ ಮಾಡಿಸಿದಂತಿದೆ. ಒಳಿತು-ಕೆಡುಕು, ಅಸುರೀ ಶಕ್ತಿ-ದೈವೀ ಶಕ್ತಿಗಳ ಸಂಘರ್ಷ,ಪಾಪ-ಪುಣ್ಯಗಳ ಘರ್ಷಣೆಯ ಚಿತ್ರಣವನ್ನು ಯಕ್ಷಗಾನದಲ್ಲಿ ಕಾಣುತ್ತೇವೆ,ರಾಕ್ಷಸ ಶಕ್ತಿಗಳು ಆರಂಭದಲ್ಲಿ ವಿಜೃಂಭಿಸಿ ಕೊನೆಗೆ ದೈವೀಶಕ್ತಿ ರಾಕ್ಷಸ ಶಕ್ತಿಯನ್ನು ದಮನಿಸಿ ಯಾ ನಾಶಮಾಡಿ ದೇವಶಕ್ತಿ ಗೆಲ್ಲುವುದನ್ನು ಬಹುತೇಕ ಯಕ್ಷಗಾನ ಪ್ರಸಂಗಗಳಲ್ಲಿ ನೋಡುತ್ತೇವೆ.ಸಮುದ್ರ ಮಥನದ ಕಥೆಯಲ್ಲಿ ದೇವ-ಅಸುರ ಶಕ್ತಿಗಳು ಹಗ್ಗ ಜಗ್ಗಾಟದಂತೆ ಒಂದೇ ಕಾಲದಲ್ಲಿ ಪರಸ್ಪರ ಮುಖಾಮುಖಿಯೂ,ವಿಮುಖವೂ ಆದ ರೀತಿಯಲ್ಲಿ ವರ್ತಿಸುವಂತೆ ಯಕ್ಷಗಾನದ ಪ್ರಸಂಗದ ನಡೆಯಲ್ಲೂ ಭಿನ್ನ ಭಿನ್ನ ವ್ಯಕ್ತಿತ್ವಗಳು ಕ್ರಿಯೆ-ಪ್ರತಿಕ್ರಿಯೆಗಳ ಮೂಲಕ ಒಂದು ಸಮಸೆಳೆತದ ತತ್ವವನ್ನು ಪಾಲಿಸುತ್ತವೆ.

ಪುರಾಣ ಕೇಂದ್ರಿತ ಯಕ್ಷಗಾನ ಪ್ರಸಂಗಗಳಲ್ಲಿ ದೇವ, ರಾಕ್ಷಸ, ಮಾನುಷ ವ್ಯಕ್ತಿತ್ವಗಳಲ್ಲದೇ ಕಪಿ,ಗರುಡ, ನಾಗ, ಹಂಸ, ಕರಡಿ,ಮತ್ಸ್ಯ,ವರಾಹ,ಶುಕ,ನರಸಿಂಹ ಮೊದಲಾದ ಪ್ರಾಣಿ ಪ್ರಪಂಚದ ಭಾವ ಪ್ರತಿಮೆಗಳು ಕಾಣಿಸಿಕೊಂಡು ಮಾನುಷ, ಅತಿಮಾನುಷ ಸಂಗತಿಗಳನ್ನು ರಂಗದಲ್ಲಿ ಸಾಕ್ಷೀಕರಿಸುತ್ತವೆ.ತನ್ಮೂಲಕ ಪ್ರಪಂಚದ ವೈವಿಧ್ಯಪೂರ್ಣವಾದ ವ್ಯವಹಾರಗಳ ಅನುಭವ ಜ್ಞಾನವನ್ನು ಕಲಾಮಾಧ್ಯಮದ ಮೂಲಕ ನೀಡುವ ಪ್ರಯತ್ನವನ್ನು ಈ ಪುರಾಣ ಸಂಬಂಧಿ ಪ್ರಸಂಗಗಳು ನಿರ್ವಹಿಸುತ್ತವೆ.

ಯಕ್ಷಗಾನ ಪ್ರಸಂಗಗಳಲ್ಲಿ ಬರುವ ಅಸುರರೆಲ್ಲ ದುಷ್ಟರಲ್ಲ.ಒಳ್ಳೆದು ಕೆಟ್ಟದ್ದನ್ನು ಕಪ್ಪು ಬಿಳುಪಿನಂತೆ ನೋಡುವ ಜಾಯಮಾನ ಇಲ್ಲಿನದಲ್ಲ. 'ದುರುಳನೊಬ್ಬನಿಗೆ ಸುಂದರಿಯೂ, ಸುಗುಣನೂ ಆದ ತಂಗಿಯೋ, ಮಗನೋ, ಮಗಳೋ, ಪತ್ನಿಯೋ ಇರುತ್ತಾರೆ. ಹಾಗೆಯೇ ದೇವತೆಗಳ ವರ್ಗದ ವ್ಯಕ್ತಿಯೊಬ್ಬ ಅದೈವಿಕ ಚರ್ಯೆಗಳಿಗೆ ಮುಂದಾಗುತ್ತಾನೆ. ಮನುಷ್ಯನಂತೂ ಸಂದರ್ಭಾನುಸಾರ ದೇವ ಮತ್ತು ಅಸುರೀ ಶಕ್ತಿಗಳ ಸ್ವಭಾವವನ್ನು ಮೃಗೀಯ ಗುಣಗಳನ್ನು ಒಳಗೊಳ್ಳುತ್ತಾನೆ.ಹೀಗೆ ಪುರಾಣ ಕಥೆಯಾಧರಿತ ಪ್ರಸಂಗಗಳು ಸಹೃದಯನ ಅಂತರಂಗದಲ್ಲಿ ಭಾವಸ್ಪಂದನವನ್ನಿತ್ತು ಅದನ್ನು ವಿವಿಧ ರೀತಿಯ ಜೀವನದ ಭಾವನೆಗಳನ್ನು ಗರ್ಭಿಕರಿಸಿಕೊಂಡಿದೆ'[೧]. ಲೌಕಿಕ ಮತ್ತು ಆಗಮಿಕ ಮೌಲ್ಯಗಳು ಯಕ್ಷಗಾನ ಪೌರಾಣಿಕ ಪ್ರಸಂಗ ಸಾಹಿತ್ಯದಲ್ಲಿ ಸಮನ್ವಯಗೊಂಡಿದೆ.

ಯಕ್ಷಗಾನದ ವೇಷಗಾರಿಕೆಯ ಶಿಲ್ಪಸಾಂಗತ್ಯ ಪೌರಾಣಿಕ ಮತ್ತು ಐತಿಹಾಸಿಕ ಪ್ರಸಂಗಗಳ ಅಭಿವ್ಯಕ್ತಿಗೆ ಪೂರಕವಾಗಿದೆ. ಪಾತ್ರಗಳ ಮುಖವರ್ಣಿಕೆ, ವೇಷ ಭೂಷಣ, ಭುಜಕಟ್ಟು, ಎದೆಪದಕ, ವೀರಕಸೆ,ವಿವಿಧ ವಿನ್ಯಾಸದ ಕಿರೀಟವೇ ಮೊದಲಾದ ಶಿರೋಭೂಷಣಗಳು ಅದ್ಭುತ ರಮ್ಯ ವ್ಯಕ್ತಿತ್ವಗಳ ಸಾಕಾರಕ್ಕೆ ಅನುಯೋಜ್ಯವಾಗಿದೆ.ಇಂದಿಗೂ ವಿಶಿಷ್ಟವಾಗಿರುವ ಈ ವೇಷ ವಿನ್ಯಾಸ ಯಕ್ಷಗಾನಕ್ಕೆ ಕಲಾಪ್ರಕಾರಗಳಲ್ಲಿ ಅನನ್ಯವಾದ ಸ್ಥಾನವನ್ನು ಒದಗಿಸಿದೆ.ನೃತ್ಯದಲ್ಲಿರುವ ದಿಗಿಣವೂ,ನರ್ತನದ ವಿವಿಧ ರೀತಿಗಳು ಇದಕ್ಕೆ ಪೂರಕವಾಗಿದೆ. ಇವುಗಳು ಪುರಾಣ ಮತ್ತು ಐತಿಹಾಸಿಕ ಕಥಾನಕಗಳನ್ನೇ ಯಕ್ಷಗಾನ ಹೆಚ್ಚು ಹೆಚ್ಚು ಅವಲಂಬಿಸುವಂತೆ ಮಾಡಿದೆ.

ಯಕ್ಷಗಾನದಲ್ಲಿ ನೃತ್ಯಾಭಿನಯಗಳಿಗೆ ಪೂರಕವಾಗಿ ಸಮತೋಲನವನ್ನು ಹೊಂದಿದ ಮಾತುಗಾರಿಕೆಯಿದೆ.ಈ ಮಾತುಗಾರಿಕೆ ಆಲಂಕಾರಿಕ ಪೌರಾಣಿಕ ಶೈಲಿಯನ್ನು ಹೊಂದಿದೆ.ನಿರ್ದಿಷ್ಟ ಧಾಟಿಯ ಶ್ರುತಿಯಲ್ಲಿರಬೇಕಾಗುತ್ತದೆ.ಹಾಡುಗಾರಿಕೆಯ ನಂತರ ಪಾತ್ರಧಾರಿ ಅಥವಾ ಅರ್ಥಧಾರಿ ಆಡುವ ಮಾತಿಗೂ ಶ್ರುತಿ,ಸ್ವರಭಾರ,ಭಾವರಸಪ್ರತಿಪಾದನೆ ಇತ್ಯಾದಿಗಳು ಸಂತುಲಿತವಾಗಿದ್ದು ನಾಟ್ಯಗತಿಯಲ್ಲಿ ಇರಬೇಕಾಗುತ್ತದೆ.ಇವೆಲ್ಲವೂ ಪೌರಾಣಿಕ ಮತ್ತು ಐತಿಹಾಸಿಕ ಪ್ರಸಂಗಗಳ ಪ್ರದರ್ಶನಕ್ಕೆ ಯೋಗ್ಯವಾಗಿದೆ ಎಂಬುದನ್ನು ತಿಳಿಸಲು ಇಷ್ಟು ವಿಸ್ತಾರ ವಿವರಣೆ ನೀಡಬೇಕಾಯಿತು.

ಪೌರಾಣಿಕ, ಐತಿಹಾಸಿಕ ಪ್ರಸಂಗಗಳೇ ಯಕ್ಷಗಾನಕ್ಕೆ ಯೋಗ್ಯ. ಉಳಿದವುಗಳಲ್ಲ ಎಂಬುದು ಇಲ್ಲಿನ ತೀರ್ಮಾನವಲ್ಲ.ಹೆಚ್ಚು ಪ್ರಸಂಗಗಳು ಈ ಮಾದರಿಯವು ಎನ್ನುವುದು ಮತ್ತು ಅದಕ್ಕೆ ಹೆಚ್ಚು ಯೋಗ್ಯವಾದ ಪರಿಸರ ಯಕ್ಷಗಾನ ಕಲಾಪ್ರಕಾರದಲ್ಲಿದೆ ಎಂಬುದು ಇಲ್ಲಿನ ಮಥಿತಾರ್ಥ.ಇವುಗಳಿಗಿಂತ ಹೊರತಾದ ಪ್ರಯೋಗಗಳು ಸಾಕಷ್ಟು ಆಗಿವೆ.ಸಾಮಾಜಿಕ, ಜಾಗೃತಿ ಕೇಂದ್ರಿತ, ಕುತೂಹಲಕಾರಿ ಪ್ರಯೋಗ ಪ್ರಸಂಗಗಳು ಬಂದಿವೆ. ಇತ್ತೀಚೆಗಿನ ದಿನಗಳಲ್ಲಿ ಸಾಮಾಜಿಕ ಕಥನಗಳು ಜನಪ್ರಿಯ ಆದದ್ದಿದೆ.

ವಸ್ತು ವೈವಿಧ್ಯದ ದೃಷ್ಟಿಯಿಂದ ಮೂಲ್ಕಿ ವೆಂಕಣ್ಣ ಕವಿ ರಚಿಸಿದ 'ಮಾನಸ ಚರಿತ್ರೆ' ವಿನೂತನ ಪ್ರಯೋಗ. ಅದರಲ್ಲಿ ಮನಸ್ಸು, ಕ್ರೋಧ,ಮೋಹ, ಶಾಂತಿ ಮೊದಲಾದ ಭಾವಗಳೇ ಪಾತ್ರಗಳು. ಪೌರಾಣಿಕೇತರವಾದ ಕಥೆಯ ಮೊದಲ ಪ್ರಸಂಗ ಇದು ಎಂದು ಡಾ.ಎಂ.ಪ್ರಭಾಕರ ಜೋಷಿಯವರು ಅಭಿಪ್ರಾಯ ಪಡುತ್ತಾರೆ.[೨] ಕವಿ ಮುದ್ದಣನ 'ರತ್ನಾವತಿ ಕಲ್ಯಾಣ' ರಚನೆಗೊಂಡ ಕಾಲದಲ್ಲಿ 'ಪಲಾಂಡು (ನೀರುಳ್ಳಿ)ಚರಿತೆ', 'ಮೋಹಿನಿ (ಹೊಗೆಸೊಪ್ಪು)ಚರಿತ್ರೆ' ಮೊದಲಾದ ಕುತೂಹಲಕಾರಿ ಪ್ರಸಂಗಗಳು ಪ್ರಕಟಗೊಂಡಿವೆ. ಶೇಕ್ಸ್‌ಪಿಯರ್‌ನ ನಾಟಕದ ಯಕ್ಷಗಾನ ರೂಪ ೧೯ನೇ ಶತಮಾನದ ಆರಂಭ ಕಾಲದಲ್ಲಿ ಯಕ್ಷಗಾನವಾಗಿತ್ತು ಎಂದು ಡಾ.ಶ್ರೀನಿವಾಸ ಹಾವನೂರು ಹೇಳಿದ್ದಾರೆ.ಇಪ್ಪತ್ತನೇಯ ಶತಮಾನದ ಆರಂಭದಲ್ಲಿ ರಚಿತಗೊಂಡ ದಿವಂಗತ ಜಿ.ಆರ್ ಪಾಂಡೇಶ್ವರರ 'ಮಾರಾವತಾರ' ವಿಶಿಷ್ಟ ಏಕಪಾತ್ರ ಪ್ರಸಂಗ. 'ಏಸು ಕ್ರಿಸ್ತ ಮಹಾತ್ಮೆ' ಎಂಬ ಏಸುವಿನ ಗುಣಗಾನ ಮಾಡುವ ಯಕ್ಷಗಾನ ಕೃತಿ ಹಲವು ಪ್ರದರ್ಶನ ಕಂಡಿದೆ.

ಧರ್ಮಾಧರಿತ ಯಕ್ಷಗಾನ ಪ್ರಸಂಗಗಳೂ ಬಂದಿವೆ.ಜೈನ ಯಕ್ಷಗಾನ 'ಅಹಿಂಸಾ ಕಥೆ',ವೀರಶೈವ ಯಕ್ಷಗಾನ 'ಶರಣಲೀಲಾ ಚರಿತ್ರೆ',ಮೊದಲಾದವು ಇವುಗಳಲ್ಲಿ ಮುಖ್ಯವಾದವುಗಳು. ಸ್ವಾತಂತ್ರ್ಯೋತ್ತರ ದಿನಗಳಲ್ಲಿ ಕಾಲ್ಪನಿಕ,ಸಿನಿಮಾ ಕಥೆಗಳೂ ಯಕ್ಷಗಾನ ಪ್ರಸಂಗಗಳಾದದ್ದಿದೆ. ಸಂಸ್ಕೃತ ನಾಟಕಗಳು,ಗುಣಸುಂದರಿ,ಸದಾರಮೆ ಮೊದಲಾದ ಕಂಪೆನಿ ನಾಟಕಗಳೂ ಪ್ರಸಂಗಗಳಾದವು.ಅಂತೆಯೇ ಸಮಾಜ ಜಾಗೃತಿಯ ಉದ್ದೇಶದಿಂದ ಸಾಕ್ಷರತೆ,ಮಿತಸಂತಾನ, ರಾತ್ರಿಶಾಲೆ, ಪರಿಸರ ಸಂರಕ್ಷಣೆ, ಏಡ್ಸ್ ಜಾಗೃತಿ ಕುರಿತ ಪ್ರಸಂಗಗಳೂ ಬಂದಿವೆ. ನಸ್ಸೇರ್ ಪ್ರತಾಪ, ಕಾಶ್ಮೀರ ವಿಜಯ, ಕಾರ್ಗಿಲ್ ವಿಜಯದಂತಹ ರಾಜಕೀಯ ಸಂಗತಿಗಳೂ ಪ್ರಸಂಗಗಳಾಗಿವೆ. ಈ ರೀತಿ ವಿಭಿನ್ನ ವಸ್ತುಗಳು ಯಕ್ಷಗಾನ ಪ್ರಸಂಗಗಳು ರಚಿತಗೊಂಡಿವೆ.[೩]

## ೪.೨ ಕೀರಿಕ್ಕಾಡು ಮಾಸ್ತರರ ಪೌರಾಣಿಕ ಪ್ರಸಂಗಗಳು

ಕೀರಿಕ್ಕಾಡು ವಿಷ್ಣು ಮಾಸ್ತರರು ಐವತ್ತಕ್ಕೂ ಹೆಚ್ಚು ಪೌರಾಣಿಕ ಪ್ರಸಂಗಗಳನ್ನು ಬರೆದಿದ್ದಾರೆ.ಅವುಗಳಲ್ಲಿ ಕೆಲವು ಪ್ರಕಟಗೊಂಡಿವೆ.ಇನ್ನು ಕೆಲವು ಹಸ್ತಪ್ರತಿಯಲ್ಲಿ ಇವೆ.ಮಾಸ್ತರರ ಪುತ್ರ ಯಕ್ಷಗಾನದ ಪ್ರಸಿದ್ಧ ಅರ್ಥಧಾರಿ ಡಾ.ರಮಾನಂದ ಬನಾರಿಯವರು ಹಸ್ತಪ್ರತಿಯಲ್ಲಿರುವ ಪ್ರಸಂಗಗಳನ್ನು ಒಂದೊಂದಾಗಿ ಮುದ್ರಿಸುತ್ತಿದ್ದಾರೆ.

ಕೀರಿಕ್ಕಾಡು ಮಾಸ್ತರರ ಪ್ರಕಟಿತ ಪೌರಾಣಿಕ ಪ್ರಸಂಗಗಳು ಒಟ್ಟು ೨೦.

ಶಿವಪಂಚಾಕ್ಷರೀ ಮಹಿಮೆ(ಶ್ವೇತ ಕುಮಾರ ಚರಿತೆ),

ಶಿವನಾಮ ಮಹಿಮೆ,

ಕಂಜಾಕ್ಷಿ ಕಲ್ಯಾಣ,

ಪುಷ್ಪವೇಣಿ ಕಲ್ಯಾಣ,

ಭೀಮಶಂಕರಮಹಿಮೆ,

ಪಾಂಚಜನ್ಯ,

ಊರ್ವಶಿ

ಪುರೂರವ,

ಬ್ರಹ್ಮಯಜ್ಞ(ಗಾಯತ್ರಿ ಪರಿಣಯ),

ಸ್ವಯಂಪ್ರಭಾ ಪರಿಣಯ,

ಜರಾಸಂಧ ಪರಾಭವ,

ಭ್ರಮರ ಕುಂತಳೆ,

ಮೃಗಾವತೀ ಪರಿಣಯ,

ಸುಲೋಚನಾ ಸ್ವಯಂವರ,

ವೀರ ಅಭಿಮನ್ಯು,

ಸೀತಾ ಪರಿತ್ಯಾಗ,

ಪ್ರಭಾವತಿ ಪರಿಣಯ,

ರಾಜಾ ಸುದರ್ಶನ,

ಕಲ್ಪ ಸುಂದರಿ ಕಲ್ಯಾಣ,

ದುರ್ಗಾ ಮಹಿಮೆ,

ರಕ್ಷಾ ಕವಚ

ಅರ್ಥಸಹಿತವಿರುವ ಯಕ್ಷಗಾನ ಪ್ರಸಂಗಗಳು: ಒಟ್ಟು ಆರು

೧.ಜರಾಸಂಧ ವಧೆ

೨.ಖರಾಸುರ ವಧೆ

೩.ಕರ್ಣಾವಸಾನ

೪.ತುಳಸೀ ಶಂಖಚೂಡ

೫.ಕುಮಾರ ವಿಜಯ

(ಪಾರ್ತಿಸುಬ್ಬನ ಪ್ರಸಂಗಕ್ಕೆ ಅರ್ಥ)

೬.ಶ್ರೀರಾಮ ಪಟ್ಟಾಭಿಷೇಕ

## ೪.೩ ಮಾಸ್ತರರ ಅಪ್ರಕಟಿತ ಪೌರಾಣಿಕ ಪ್ರಸಂಗಗಳು ; ಅರವತ್ತೆಂಟು

೧..ಪ್ರದೋಷ ಮಹಾತ್ಮೆ
೩.ರಘುನಾಥ ವಿಜಯ
೫.ಕ್ಷೇಮಂಕರೀ ದೇವಿ ಮಹಿಮೆ
೭.ವೀರಮಣಿ
೯.ದೂಷಣಾಸುರ ಕಾಳಗ
೧೧.ಕಾಮೋಢೆ
೧೩.ಸ್ವಾಮಿನಿಷ್ಟ ಎಚ್ಚಮ
೧೫.ಶೃಗಾಲ ಕಾಳಗ
೧೭.ಷಟ್ಚುರ
೧೯.ಶಿವಕವಚ
೨೧.ರಕ್ಷರತ್ನಹಾರ
೨೩.ಸೋಮದತ್ತ ವಿಜಯ
೨೫.ಭಕ್ತ ಸುಭಾಹು
೨೭.ಚಂದ್ರಸೇನ ಚಿಂತಾಮಣಿ
೨೯.ಸುಮದ್ಯೋಪಾಖ್ಯಾನ
೩೧.ವೀರಮಣಿ ಕಾಳಗ
೩೩.ಕುಶಲವ
೩೫.ಅಶೋಕ ಸುಂದರಿ
೩೭.ಪ್ರಭಾವತಿ ಪರಿಣಯ
೩೯.ವಿಶ್ರುಕ ವಿಜಯ
೪೧.ಇಂದ್ರೋತ್ಕರ್ಷ
೪೩.ಭಾನುಮತಿ ಪರಿಣಯ
೪೫.ಸೊಲಗಾವಸಾನ
೪೭.ಮಣಿಕರ್ಣಿಕಾ
೪೯.ರತ್ನಪ್ರಭ
೫೧.ಸೀತಾರಾಮ ವಿಜಯ
೫೩.ಅಂಗದ ಸಂಧಾನ

೨.ರುಕ್ಮಾವತೀ ಕಲ್ಯಾಣ
೪.ಬಭ್ರುವಾಹನ
೬.ಗಜಾಸುರ ಮೋಕ್ಷ
೮.ಅಶ್ರುಬಿಂದುಮತಿ
೧೦.ಏಕವೀರ ಏಕಾವಲೀ
೧೨.ಅಷ್ಟಾಕ್ಷರೀ ಮಹಿಮೆ
೧೪.ರಾಜಹಂಸ
೧೬.ನವಮಾಲಿಕಾ ಪರಿಣಯ
೧೮.ರಕ್ಷಾಮಣಿ
೨೦.ಶಿವಮಂತ್ರ ಮಹಿಮೆ
೨೨.ಇಕ್ಷ್ವಾಕು ವಿಜಯ
೨೪.ಜಾನಭ ಚರಿತ್ರೆ
೨೬.ರಾಜೇಯ ಪರಾಜಯ
೨೮..ಶ್ರೀಮತಿ ಪರಿಣಯ
೩೦.ಕಾಲನೇಮಿ ಕಾಳಗ
೩೨.ಸಾಹಸಚಂದ್ರ
೩೪.ಶುಭಾಂಗಿ
೩೬.ಪುಷ್ಪೋದ್ಭವ
೩೮.ವೀರೇಶ್ವರ
೪೦.ಕಾಲಯವನ ಕಾಳಗ
೪೨.ಗೋಕರ್ಣ ಕ್ಷೇತ್ರ ಮಹಾತ್ಮೆ
೪೪.ಶ್ರೀರಾಮೋಶ್ವಮೇಧದ ಭಕ್ತ
೪೬.ಕುಲಬಾಲಿಕಾ
೪೮.ವಾಮಲೋಚನ
೫೦.ಸೀಮಂತಿನಿ ಕಲ್ಯಾಣ
೫೨.ಚಂದ್ರಪ್ರಭ ಪರಿಣಯ
೫೪.ವಿಭೀಷಣ ನೀತಿ

೫೫.ವೀರ ಅಭಿಮನ್ಯು

೫೬.ಭಕ್ತ ಪ್ರಹ್ಲಾದ

೫೭.ಸೀತಾಪಹಾರ

೫೮.ರಾಜಹಂಸ ಪರಾಜಯ

೫೯.ಬಾಲಚಂದ್ರಿಕಾ

೬೦.ಅಂಬಾಲಿಕಾ

೬೧.ಮಂಜುವಾಹಿನಿ

೬೨.ಭಕ್ತಸುರತ

೬೩.ಚಂದ್ರಹಾಸ

೬೪.ಕಚೋಪಖ್ಯಾನ

೬೫.ಭ್ರಮರ ಕುಂತಳೆ

೬೬.ರಾಜವಾಹನ ವಿಜಯ

೬೭..ಮಣಿಪ್ರಭ ಪರಿಣಯ

೬೮.ಭ್ರಮರ ವೇಣಿ ಸ್ವಯಂವರ

ವಿಷ್ಣುಭಟ್ಟರ ಪೌರಾಣಿಕ ಪ್ರಸಂಗಗಳ ಕಥಾಭಾಗಗಳು ಯಕ್ಷಗಾನ ರಂಗವಿನ್ಯಾಸಕ್ಕೆ ಹೊಂದುವಂತಿದ್ದು ಸತ್ವಪೂರ್ಣವಾಗಿದೆ. ಅರ್ಥಧಾರಿಗೆ ರಸಸೃಷ್ಟಿಗೆ,ಸಹೃದಯನಿಗೆ ರಸಾಸ್ವಾದನೆಗೆ ಅನುಕೂಲವಾಗುವ ಸನ್ನಿವೇಶಗಳವೆ.ಸ್ತ್ರೀವೇಷ,ಬಣ್ಣದ ವೇಷ,ರಾಜ ವೇಷ,ಹಾಸ್ಯ ಇತ್ಯಾದಿಗಳಿಗೆ ಆಸ್ಪದವಿರುವ ಕಥೆಗಳನ್ನೇ ಅವರು ಬಹುತೇಕ ಆರಿಸಿಕೊಂಡಿದ್ದಾರೆ.ಶಿವಪುರಾಣ,ಭಾಗವತ,ಹರಿವಂಶ ಇತ್ಯಾದಿ ಪುರಾಣಗಳ ಗಣಿಯಿಂದ ಉತ್ತಮ ಕಥೆಗಳನ್ನು ಆಯ್ದುಕೊಂಡು ಪ್ರಸಂಗಗಳನ್ನು ರಚಿಸಿದ್ದಾರೆ. ಅವರ ಪೌರಾಣಿಕ ಪ್ರಸಂಗಗಳಲ್ಲಿ ಹಾಸ್ಯಕ್ಕೆ ಪ್ರಾಮುಖ್ಯತೆ ಕಡಿಮೆ. ಯಕ್ಷಗಾನಕ್ಕೊಪ್ಪುವ ರಾಜ, ಸ್ತ್ರೀ, ಚಾರಕ, ಶಬರ, ರಾಕ್ಷಸರು, ಬ್ರಾಹ್ಮಣ, ಮುನಿ, ಸೇನಾಪತಿ, ವ್ಯಾಪಾರಿ ಇತ್ಯಾದಿ ಪಾತ್ರಗಳು ಔಚಿತ್ಯಪೂರ್ಣವಾಗಿ ಕಾಣಿಸಿಕೊಂಡಿದೆ.

ಕೀರಿಕ್ಕಾಡು ವಿಷ್ಣುಮಾಸ್ತರರು ತಮ್ಮ ಪ್ರಸಂಗಗಳಿಗೆ ರಾಮಾಯಣ ಮಹಾಭಾರತಗಳೊಂದಿಗೆ ಕುಮಾರವ್ಯಾಸ ಭಾರತ,ಚಾಟು ವಿಠಲನಾಥನ ಭಾಗವತ,ತುರಂಗ ಭಾರತಗಳನ್ನು ಆಕರವಾಗಿ ಬಳಸಿಕೊಂಡಿದ್ದಂತೆ ಕಂಡುಬರುತ್ತದೆ.ಪೌರಾಣಿಕ ಘಟನೆಗಳನ್ನು ತಾಳಮದ್ದಲೆಯ ಅರ್ಥಗಾರಿಕೆಗಾಗಿ ಸೂಕ್ಷ್ಮವಾಗಿ ಅವಲೋಕಿಸಿದ್ದು ಮಾಸ್ತರರಿಗೆ ಪ್ರಸಂಗ ರಚನೆಯಲ್ಲಿ ಸಹಕಾರಿಯಾಗಿರಬೇಕು.

ಮಾಸ್ತರರ ಪೌರಾಣಿಕ ಪ್ರಸಂಗಗಳಲ್ಲಿ ಮೌಲ್ಯ ಮತ್ತು ಜನಪ್ರಿಯತೆಯ ದೃಷ್ಟಿಯಿಂದ ಪ್ರಾತಿನಿಧಿಕ ಎನ್ನಬಹುದಾದ ಪ್ರಸಂಗ 'ಶ್ವೇತ ಕುಮಾರ ಚರಿತೆ'. ಸ್ವತಃ ನಟರಾದ ಮಾಸ್ತರರು ಭಾವಪೂರ್ಣವಾದ ಮಾತುಗಾರಿಕೆ,ಪ್ರತಿಭೆ,ಪಾಂಡಿತ್ಯಗಳಿಂದ ಕೂಡಿದ ಪ್ರಸಿದ್ಧ ಅರ್ಥಧಾರಿಗಳಾಗಿದ್ದರು. ಸಹಜವಾಗಿಯೇ ಅವರಿಗೆ ರಂಗಸ್ಥಳದ ದೃಶ್ಯ ಸಂಯೋಜನೆಯ ಪರಿಣತಿ ಸಿಕ್ಕಿತು.ಪ್ರಸಂಗವೊಂದು ಬಯಲಾಟವಾಗಿ ಯಶಸ್ವಿಯಾಗುವುದಕ್ಕೆ ಬೇಕಾದ ವಿವಿಧ ರೀತಿಯ ಪಾತ್ರಗಳು, ಆಪಾತ್ರಗಳಿಗೆ ಉಚಿತವಾದ ಪದ್ಯಗಳು,ಪದ್ಯಗಳಿಗುಚಿತವಾದ ರಾಗ,ರಾಗಗಳಿಗೆ ಉಚಿತವಾದ ತಾಳಗಳನ್ನು ಹೊಂದಿಸಿ ರಚಿಸುವ ಕಲೆ ಅವರಿಗೆ ಸಿದ್ಧಿಸಿತ್ತು ಎಂಬುದಕ್ಕೆ ಅವರ ಹಲವು ಪ್ರಸಂಗಗಳೇ ಸಾಕ್ಷಿ. ಅವುಗಳಲ್ಲೊಂದಾದ 'ಶ್ವೇತ ಕುಮಾರ ಚರಿತ್ರೆ'ಯನ್ನು ಮುಂದೆ ವಿವರವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

## ೪.೪ ಕೀರಿಕ್ಕಾಡರ ಮಾಸ್ತರರ ಪ್ರಾತಿನಿಧಿಕ ಪೌರಾಣಿಕ ಪ್ರಸಂಗ 'ಶ್ವೇತಕುಮಾರ ಚರಿತ್ರೆ'

'ಶ್ವೇತಕುಮಾರ ಚರಿತ್ರೆ' ಶಿವನ ನಾಮಸ್ಮರಣೆಯ ಮೇಲ್ಮೆಯನ್ನು ಸಾರುವ ಕಥಾನಕ. ಇದಕ್ಕೆ ಶಿವ ಪಂಚಾಕ್ಷರಿ ಮಹಿಮೆ ಎಂಬ ಇನ್ನೊಂದು ಹೆಸರಿದೆ.ಈ ಪ್ರಸಂಗ ರಚನೆಯ ಉದ್ದೇಶ ಭಕ್ತಿಯ ಮಹತ್ವವನ್ನು ಹೇಳುವುದಾಗಿದೆ.ವಿಷ್ಣು ಭಟ್ಟರ ಮೂಲ ಆಗ್ರಹವೂ ಭಕ್ತಿ ಪಂಥದ ಶ್ರೇಷ್ಠತೆಯನ್ನು ಹೇಳುವುದೇ ಆಗಿದೆ.ಗಾಂಧೀ ಮಾರ್ಗಾನುಯಾಯಿಗಳಾದ ಹಿಂದಿನ ತಲೆಮಾರಿನವರಲ್ಲಿ ಅಂದಿನ ದಿನಗಳಲ್ಲಿ ಭಕ್ತಿ ಪಂಥದ ಕುರಿತು ಗೌರವವಿದ್ದುದು ಸ್ವಾಭಾವಿಕವೇ.ಯಕ್ಷಗಾನ ಕಲಾ ಪ್ರಕಾರವೂ ಭಕ್ತಿ ಪಂಥದ ಒಂದು ಶಾಖೆಯೇ.ಯಕ್ಷಗಾನದ ಬಹುತೇಕ ಮೇಳಗಳು ದೇವಸ್ಥಾನಗಳ ಕೃಪಾಪೋಷಿತ ಮೇಳಗಳೇ. ಇವತ್ತಿಗೂ ದೇವಸ್ಥಾನಗಳಂದ ತಿರುಗಾಟ ಆರಂಭಿಸುವಾಗ ಇಷ್ಟಾರ್ಥ ಸಿದ್ಧಿಯ ಕೋರಿಕೆಗಾಗಿ ಮೊದಲದಿನ ಹರಕೆಯಾಟ ಆಡುವ ಪದ್ಧತಿಯಿದೆ.

'ಶ್ವೇತಕುಮಾರ ಚರಿತ್ರೆ 'ಯ ಸ್ತುತಿ ಪದ್ಯ ಗಮನಿಸಿದರೆ ಭಕ್ತಿಯ ಕುರಿತು ಅವರ ನಿಲುವು ಸ್ಪಷ್ಟವಾಗುತ್ತದೆ. ಸಾಮಾನ್ಯ ಪ್ರಸಂಗಗಳಲ್ಲಿ ಒಂದೆರಡು ಭಾಮಿನಿಗಳಲ್ಲಿ ಮುಗಿಸುವ ಭಾಗವನ್ನು ವಿಷ್ಣು ಮಾಸ್ತರರು ಹನ್ನೆರಡು ಪದ್ಯಗಳಲ್ಲಿ ವಿಸ್ತರಿಸಿದ್ದಾರೆ.ಇಷ್ಟದೈವ ಪ್ರಾರ್ಥನೆ, ಗುರು ಸ್ಮರಣೆ, ವ್ಯಾಸ, ವಾಲ್ಮೀಕಿಗಳ ಸ್ಮರಣೆಯನ್ನು ಈ ಪದ್ಯಗಳಲ್ಲಿ ಮಾಡಿದ್ದಾರೆ.ಆದರೆ ಅವರ ಮುಂದಿನ ಪ್ರಸಂಗಗಳಲ್ಲಿ ಸ್ತುತಿ ಪದ್ಯದ ಸಂಖ್ಯೆಯನ್ನು ಇಳಿಸಿದ್ದಾರೆ. 'ಸೀತಾ ಪರಿತ್ಯಾಗ'ದಂತಹ ಇನ್ನೊಂದು ಮಹತ್ವದ ಪ್ರಸಂಗದಲ್ಲಿ ಒಂದೇ ಪದ್ಯದಲ್ಲಿ ಸ್ತುತಿಯನ್ನು ಮುಗಿಸುತ್ತಾರೆ.

ಅಜಾಮಿಳನ ಕಥೆ,ಪ್ರಹ್ಲಾದನ ಕಥೆಯನ್ನು ಹೋಲುವ ಪ್ರಸಂಗ ಶ್ವೇತಕುಮಾರನದು. ಅಜಾಮಿಳ ಅಸಂಬದ್ಧಗಳನ್ನೆಲ್ಲಾ ಮಾಡಿ ಸಾಯುವಾಗ ತನ್ನ ಮಗನ ಹೆಸರು 'ನಾರಾಯಣ' ಎಂದುದಕ್ಕಾಗಿ ವೈಕುಂಠ ಸೇರಿದಂತೆ ಶ್ವೇತಕುಮಾರ ಸಾಯುವ ಹೊತ್ತಿಗೆ ತನ್ನ ಪತ್ನಿಯ ಹೆಸರು 'ಶಿವೇ'ಎಂದು ಕರೆದುದಕ್ಕೆ ಯಮನಿಂದ ವರ ಪಡೆದು ಮರಳಿ ಬದುಕಿದ ಕುತೂಹಲಕಾರಿ ಕಥೆ ಶ್ವೇತಕುಮಾರನದು.

ರುದ್ರಪುರದ ರತ್ನಶೇಖರನೆಂಬ ದೊರೆ ಮೃಗಬೇಟೆಗೆ ಹೋದಾಗ ವಾಸವಾರಣ್ಯದ ಬೇಡರ ದೊರೆ ಶ್ವೇತ ಪ್ರಕಾಶನೊಡನೆ ಹಂದಿಗೆ ಬಾಣವೆಸೆದು ಅನಂತರ ನಡೆದ ಕಾಳಗದಲ್ಲಿ ಸಾಯುತ್ತಾನೆ.

ರತ್ನಶೇಖರನ ಮಗ ಶ್ವೇತಕುಮಾರನಿಗೆ ಪಟ್ಟಾಭಿಷೇಕವಾಗುತ್ತದೆ. ನಾರದನ ಸೂಚನೆಯ ಮೇರೆಗೆ ಕಾಶೀರಾಜ ಶೂರಸೇನನ ಮಗಳು ಶಿವೆಯನ್ನು ಈತ ವಿವಾಹವಾಗುತ್ತಾನೆ. ಮದುವೆ ಮುಗಿದು ಮರಳಿ ಬರುವಾಗ ದಾರಿಯಲ್ಲಿ ಕರಾಳಲೋಚನೆಯೆಂಬ ರಾಕ್ಷಸಿ ಇದಿರಾಗಿ ಬಂದು ತಡೆಯುತ್ತಾಳೆ.ಅವಳೊಂದಿಗೆ ನಡೆದ ಯುದ್ಧದಲ್ಲಿ ಶ್ವೇತಕುಮಾರ ಅವಳ ಕೈಗಳನ್ನು ಕತ್ತರಿಸುತ್ತಾನೆ. ಆಕೆ ತನ್ನ ಅಣ್ಣನಾದ ಶೋಣಿತಾಪುರದ ದೊರೆ ರಕ್ಕಸ ದುರ್ಜಯಾಸುರನಲ್ಲಿ ದೂರು ಕೊಡುತ್ತಾಳೆ.ದುರ್ಜಯಾಸುರನಿಗೆ ಒಂದು ವರವಿದೆ.ಒಮ್ಮೆ ಸತ್ತು ಮತ್ತೆ ಮರಳಿ ಬದುಕಿದವನಿಂದ ಮಾತ್ರ ಆತನಿಗೆ ಸಾವು ಎಂದು. ಇತ್ತ ಶ್ವೇತಕುಮಾರ ಶಿವೆಯನ್ನು ಅರಮನೆಯಲ್ಲಿ ಬಿಟ್ಟು ವನವಿಹಾರಕ್ಕೆ ತೆರಳುತ್ತಾನೆ. ಅಲ್ಲಿ ತ್ರಿಲೋಕ ಸುಂದರಿಯೆಂಬ ಹೆಣ್ಣನ್ನು ನೋಡಿ ಮೋಹಿಸಿ ತನ್ನ ರಾಜ್ಯಾಧಿಕಾರವನ್ನು ಒತ್ತೆಯಿರಿಸಿ ಆಕೆಯನ್ನು ವಿವಾಹವಾಗುತ್ತಾನೆ.

ದುರ್ಜಯನ ಮಗ ಲೋಹಿತಾಕ್ಷ ರುದ್ರಪುರಕ್ಕೆ ದಾಳಿಯಿಟ್ಟು ಶಿವೆಯನ್ನು ಸೆರೆಹಿಡಿದು ತಂದೆ ದುರ್ಜಯನಿಗೆ ಒಪ್ಪಿಸುತ್ತಾನೆ. ಶಿವೆಯನ್ನು ದುರ್ಜಯನ ಮಗ ಅಪಹರಿಸಿದ್ದನ್ನು ನಾರದ ಮಹರ್ಷಿಗಳಿಂದ ತಿಳಿದು ಮೊದಲು ವಚನ ನೀಡಿದಂತೆ ರಾಜ್ಯಾಧಿಕಾರವನ್ನು ತ್ರಿಲೋಕ ಸುಂದರಿಗೆ ನೀಡಿ ಶ್ವೇತಕುಮಾರ ದುರ್ಜಯನ ಶೋಣಿತಾಪುರಕ್ಕೆ ದಾಳಿಯಿಡುತ್ತಾನೆ.ಯುದ್ಧದಲ್ಲಿ ದುರ್ಜಯನಿಂದ ಸಾಯುತ್ತನೆ. ಪ್ರಾಣ ಬಿಡುವ ಸಮಯದಲ್ಲಿ 'ಶಿವೇ' ಎಂದು ಮಡದಿಯನ್ನು ಕರೆದ ಪುಣ್ಯದಿಂದ ಯಮನ ಕರುಣೆಗೆ ಪಾತ್ರನಾದ. ರಂಭೆಯೊಂದಿಗೆ ಸಮಾಗಮ ಸೌಖ್ಯ ದೊರೆಯಿತು.ರಂಭೆಯ ಉಪದೇಶದಂತೆ ಶಿವ ಪಂಚಾಕ್ಷರಿ ಮಂತ್ರವನ್ನುಪಠಿಸುತ್ತಾ ಶ್ವೇತಕುಮಾರ ಶಿವನ ಪ್ರೀತಿಗೆ ಪಾತ್ರನಾಗುತ್ತಾನೆ.ಯಮಲೋಕದಿಂದ ಬಿಡುಗಡೆಗೊಂಡು ಸಶರೀರಿಯಾಗಿ ಭೂಲೋಕಕ್ಕೆ ಮರಳಿ ದುರ್ಜಯಾಸುರನನ್ನು ಸಂಹರಿಸಿ ಶಿವೆಯೊಡನೆ ಸುಖವಾಗಿ ರಾಜ್ಯವಾಳುವಲ್ಲಿಗೆ ಪ್ರಸಂಗ ಮುಗಿಯುತ್ತದೆ.

ಪ್ರಸಂಗದ ಕಥೆ ಸರಳವಾದುದು. ರಾತ್ರಿಯಿಡೀ ಆಟವಾಡಬಹುದಾದ ಪ್ರಸಂಗವಿದು.ಮುದ್ದಣ ಹಾಕಿ ಕೊಟ್ಟ ದಾರಿಯಿದು.ಇದರಲ್ಲಿ ಭಕ್ತಿಯ ಮೇಲ್ಮೆಯ ಪ್ರತಿಪಾದನೆಯೇ ಮುಖ್ಯವಾದರೂ ಬದುಕಿನ ಸಂಕೀರ್ಣತೆಯ ಒಳನೋಟಗಳೂ ಇವೆ.ಈ ಪ್ರಸಂಗದಲ್ಲಿ ಕೀರಿಕ್ಕಾಡು ಮಾಸ್ತರ್ ಎಂಬುದನ್ನು ಅನುವಾದ ಮಾಡಿ 'ಕಿರುಗಹನ ಬೋಧಕನು'ಎಂದು ತಮ್ಮನ್ನು ಕರೆದುಕೊಂಡಿದ್ದಾರೆ.ಗಹನವಾದ ವಿಚಾರವೊಂದನ್ನು ಕಿರಿದರಲ್ಲಿ ಹೇಳಿದ್ದೇನೆಂದು ಸೂಚ್ಯವಾಗಿ ಹೇಳುವುದು ಅವರ ಉದ್ದೇಶವಾಗಿರಬೇಕು.

ಪ್ರಸಂಗದಲ್ಲಿ ಮದುವೆಗೆ ಮೊದಲು ಶ್ವೇತ ಕುಮಾರ ಬಲು ಧೀರೋದಾತ್ತ ಪಾತ್ರ. ಆತನನ್ನು ಪ್ರಸಂಗದ ಪದ್ಯ' ವೀರ, ಸುಕುಮಾರ, ಗಂಭೀರ, ಜಿತಮಾರ, ಸಾರಸುಗುಣ ಹಾರ' ಎನ್ನುತ್ತದೆ. ಈ 'ಜಿತಮಾರ'ನಿಗೆ ವಿವಾಹಕ್ಕೆ ವಧುವಾಗಿ ನಾರದರು ಸೂಚಿಸುವುದು,'ಆದಿಮಾತೆಯ ಪೋಲ್ವ ಸುಂದರಾಂಗದೊಳು, ಪಾದ ಸೇವಿತ ಪಟ್ಟದರಸಿ'ಯಾಗಬಲ್ಲ ಶಿವೆಯನ್ನು. ಶಿವೆಯ ಕೈ ಹಿಡಿದ ಬಳಿಕ ಆತ ಮನ್ಮಥನಿಗೆ ತಲೆಬಾಗುತ್ತಾನೆ ಎಂದು ಮುಂದಿನ ಕಥೆ ಹೇಳುತ್ತದೆ.

ಯೌವನದಲ್ಲಿ ಸ್ವಯಂ ನಿಯಂತ್ರಣದಿಂದ ಮಾರನನ್ನೇ ಎದುರಿಸಿದ ನಡುವಯಸ್ಸಿಗೆ ಬಂದಾಗ ವಿಚಿತ್ರ ಕಾಮಿಯಾಗುವ ವಿಕ್ಷಿಪ್ತತೆ ಶ್ವೇತಕುಮಾರನ ಪಾತ್ರದ್ದು. ಭೋಗದಿಂದ ಭೋಗ ದಾಹ ಶಮನಗೊಳ್ಳುವುದಿಲ್ಲ.ಬದಲಾಗಿ ಹೆಚ್ಚುತ್ತದೆ ಎಂಬ ಲೋಕ ಸತ್ಯವನ್ನು ಸೂಚಿಸುವುದು ಕವಿಯ ಉದ್ದೇಶವಿರಬೇಕು. ಶ್ವೇತ ಕುಮಾರ ಎಷ್ಟು ಭೋಗ ಲಾಲಸೆಯ ವ್ಯಕ್ತಿಯಾಗುತ್ತಾನೆಂದರೆ ವನದಲ್ಲಿ ತ್ರಿಲೋಕ ಸುಂದರಿಯೊಡನೆ ವಿಲಾಸಿಯಾಗಿ ಜೀವಿಸುತ್ತಿರುವಾಗ ಮಡದಿ ಶಿವೆಯನ್ನು ಮರೆಯುತ್ತಾನೆ. ದುರ್ಜಯನಿಂದ ಮರಣವನ್ನಪ್ಪಿದ ಬಳಿಕ ಯಮಲೋಕದಲ್ಲೂ ರಂಭೆಯನ್ನು ಸೇರುವ ಆಸೆ ವ್ಯಕ್ತಪಡಿಸುತ್ತಾನೆ.

ಬಲು ತಿಳಿಯಾದ ಸರಳ ನಿರೂಪಣೆ ಈ ಪ್ರಸಂಗದ ಧನಾತ್ಮಕ ಅಂಶ. 'ಆಗಾಗ ದೃಶ್ಯ ಬದಲಾವಣೆ, ಯಾವ ದೃಶ್ಯವೂ ದೀರ್ಘವಾಗದೇ ಇರುವುದು, ನಡುನಡುವೆ ಹಾಸ್ಯ ಪ್ರಸಂಗಗಳು, ಯಕ್ಷಗಾನ ಬಯಲಾಟದ ವಿಶಿಷ್ಟವೇಷಗಳಾದ ಕೋಲು ಕಿರೀಟ, ಕಿರಾತ, ಬಣ್ಣ, ಪಕಡಿ, ಸ್ತ್ರೀಪಾತ್ರಗಳು ಇವುಗಳಿಗೆಲ್ಲ ಸಾಕಷ್ಟು ಅವಕಾಶಗಳು ದೊರೆತಿದೆ.[೮] ಎಲ್ಲಕ್ಕಿಂತ ದ್ರುತ ಗತಿಯಲ್ಲಿ ಕಥೆಯ ಓಟ ಇವುಗಳಿಂದ ಈ ಪ್ರಸಂಗ ತೆಂಕು ಮತ್ತು ಬಡಗು ತಿಟ್ಟುಗಳಲ್ಲಿ ಜನಪ್ರೀತಿಗೆ ಕಾರಣವಾಗಿದೆ.

ಪುರಾಣ ಪಾತ್ರಗಳಿಗೆ ಹೋಲಿಸುವುದಿದ್ದರೆ ಶ್ವೇತಕುಮಾರನಿಗೆ ಹೋಲಿಸಬಹುದಾದ ಇನ್ನೊಂದು ಪಾತ್ರ ನಳನದ್ದು.ಶ್ವೇತಕುಮಾರ ಮತ್ತು ನಳ ಹೆಚ್ಚು ಕಡಿಮೆ ಸಮಾನ ಪಾತ್ರಗಳು.ಇಬ್ಬರೂ ಜಿತೇಂದ್ರಿಯರು.ಇಬ್ಬರೂ ವಿವಾಹವಾದೊಡನೆ ಭೋಗ ವಿಲಾಸಿಗಳಾಗಿ ಕರ್ತವ್ಯ ಭ್ರಷ್ಟರಾದವರು. ಇಬ್ಬರೂ ಬಳಿಕ ಮಡಿದ ಸಾಧನೆಯಿಂದ ಕಳೆದು ಹೋದುದನ್ನೆಲ್ಲ ಮರಳಿ ಪಡೆಯುತ್ತಾರೆ.ಒಂದು ಮಾತ್ರ ವ್ಯತ್ಯಾಸ.ನಳ ಋತುಪರ್ಣನಂತಹ ರಾಜನ ಅಧೀನದಲ್ಲಿದ್ದು ರಾಜಧರ್ಮದ ಮರ್ಮವನ್ನು ಕಲಿತು ಕಲಿಭಾಧೆಯಿಂದ ಮುಕ್ತನಾಗುತ್ತಾನೆ. ಶ್ವೇತಕುಮಾರ ರಂಭೆಯಿಂದ ಪಂಚಾಕ್ಷರೀ ಮಂತ್ರೋಪದೇಶ ಪಡೆದು ಭಕ್ತಿಯಿಂದ ಶಿವನನ್ನೊಲಿಸಿಕೊಂಡು ತನ್ನ ವಿಪತ್ತನ್ನು ನೀಗಿಕೊಳ್ಳುತ್ತಾನೆ. ಕಲಿಯನ್ನು ಕಳೆದುಕೊಳ್ಳಲು ಮಂತ್ರೋಪದೇಶವನ್ನು ಪಡೆದರೂ ನಳನ ಹೋರಾಟ ನಿಜ ಜೀವನಕ್ಕೆ ಹತ್ತಿರವಾದುದು. ನಳಚರಿತ್ರೆಯಲ್ಲಿ ಕರುಣ ರಸಕ್ಕೆ ಪ್ರಾಶಸ್ತ್ಯ.ಶ್ವೇತಕುಮಾರ ಚರಿತ್ರೆಯಲ್ಲಿ ಶೃಂಗಾರ ಹಾಸ್ಯಕ್ಕೆ ಪ್ರಾಧಾನ್ಯ.

ಪ್ರಸಂಗದಲ್ಲಿ ಎರಡು ರೀತಿಯ ಹಾಸ್ಯ ಪ್ರಸಂಗಗಳಿಗೆ ಅವಕಾಶವಿದೆ.ಒಂದು ಬೇಟೆಯ ಪ್ರಸಂಗ,ದೂತನ ಭಾಗ ಮತ್ತು ಪುರೋಹಿತನ ಹಾಸ್ಯ. ಇನ್ನೊಂದು ಗಂಭೀರ ಪಾತ್ರಗಳ ಸಂಭಾಷಣೆಯಲ್ಲಿ ಹುಟ್ಟುವ ಹಾಸ್ಯ.ಕಥೆಯ ಗಂಭೀರ ಸನ್ನಿವೇಶಗಳು ಒಂದೊಂದು ಹಾಸ್ಯ ಪ್ರಸಂಗ ಬಂದು ಉಲ್ಲಾಸಗೊಳಿಸುತ್ತದೆ. ತ್ರಿಲೋಕ ಸುಂದರಿಯ ಬಳಿ ಶ್ವೇತಕುಮಾರನಿದ್ದಾಗ ಆತನೊಡನೆ ನಾರದನ

ಮಾತುಕತೆ,ನಾರದನಿಂದ ತ್ರಿಲೋಕ ಸುಂದರಿಯನ್ನು ಅಡಗಿಸುವ ಶ್ವೇತಕುಮಾರನ ಪ್ರಯತ್ನ ಇವು ತಿಳಿಹಾಸ್ಯಕ್ಕೆ ಉದಾಹರಣೆ.

ಯಮನ ಒಡ್ಡೋಲಗ ಒಂದು ಉತ್ತಮ ಹಾಸ್ಯಭಾಗ.ವಿವಿಧ ಪ್ರೇತಾತ್ಮಗಳ ಬಗೆಗೆ ಯಮ ಚಿತ್ರಗುಪ್ತನಲ್ಲಿ ಕೇಳುವುದು,ಚಿತ್ರಗುಪ್ತ ಆ ಪ್ರೇತಾತ್ಮಗಳು ಭೂಮಿಯಲ್ಲಿದ್ದಾಗ ಮಾಡಿದ ಕಾರ್ಯಗಳನ್ನು ವಿವರಿಸುವುದು. ಅದಕ್ಕೆ ಯಮ ಶಿಕ್ಷೆ ವಿಧಿಸುವುದು, ಇವೆಲ್ಲ ಒಂದು ಸ್ತರದಲ್ಲಿ ವಿನೋದಕ್ಕೂ, ಭಯಮಿಶ್ರಿತ ಮಾರ್ಗದರ್ಶನಕ್ಕೂ ಕಾರಣವಾಗುತ್ತವೆ.

ಶ್ವೇತ ಕುಮಾರನು ಪ್ರೇತಾತ್ಮವಾಗಿಯು ರಂಭೆಯ ಸಂಗವನ್ನು ಬಯಸುವುದು,ರಂಭೆ ಪ್ರೇತಾತ್ಮ ಸಂವಾದ ಉತ್ತಮ ವಿನೋದ ಸನ್ನಿವೇಶಗಳು.ಕವಿ 'ಸತ್ತ ನೃಪನಾ ಜ್ಯೋತಿಯನು ಯಮಭಟರು ತಂದ'ರೆಂದು ಹೇಳುತ್ತಾರೆ. ಆದ್ದರಿಂದ ಅಸ್ಥಿಪಂಜರದ ವೇಷದ ಬದಲು ಶ್ವೇತಕುಮಾರನೇ ಚಿನ್ನದ ಬಣ್ಣದ ಮುಖವಾಡ ತೊಟ್ಟು ಬಂದರೆ ಸರಿಯಾದೀತು ಎಂಬ ರಾಘವ ನಂಬಿಯಾರರ ವಿವರಣೆ[೬] ಒಪ್ಪತಕ್ಕದ್ದೇ.

ಮುದ್ದಣನ ಪ್ರಸಂಗ ರಚನಾ ಕೌಶಲಕ್ಕೆ ಮನಸೋತು ಪ್ರಸಂಗ ಬರೆದವರು ಕೀರಿಕ್ಕಾಡು ಮಾಸ್ತರರು.ಹಿರಿಯ ಬಲಿಪ ನಾರಾಯಣ ಭಾಗವತರೂ ಇದೇ ಮಾರ್ಗದವರು. ಅವರ ಪ್ರಸಂಗವೂ ಮುದ್ದಣನ ಪ್ರಭಾವದಿಂದ ಹೊರತಾಗಿಲ್ಲ ಎಂಬುದನ್ನು ಯಕ್ಷಗಾನ ವಿಮರ್ಶಕ ರಾಘವ ನಂಬಿಯಾರರು ಗುರುತಿಸಿದ್ದಾರೆ.[೭] ಶ್ವೇತ ಕುಮಾರ ಚರಿತ್ರೆ ಬರೆಯುವಾಗ ಅವರು ಮುದ್ದಣನ ಕುಮಾರ ವಿಜಯದ ರಚನಾ ವಿನ್ಯಾಸವನ್ನು ಬಹುವಾಗಿ ಅನುಸರಿಸಿದ್ದಾರೆ.

ಉದಾಹರಣೆಗೆ ಮುದ್ದಣನ ಕುಮಾರವಿಜಯದ ಮಂಗಲಾಚರಣೆ ಮತ್ತು ಶ್ವೇತ ಕುಮಾರ ಚರಿತೆಯ ಸ್ತುತಿಪದ್ಯವನ್ನು ನೋಡಬಹುದು. ಎರಡೂ ನಾಟೀ ರೂಪದಲ್ಲಿದೆ.

ಜಯ ಜಯ ಗಣ ಗಣನಾಯಕ।
ಜಯ ಜಯ ಮಂಗಲದಾಯಕ॥
ಜಯ ಜಯ ವಿಘ್ನನಿವಾರಕ।
ಜಯ ಜಯ ಸಿರಿ ಬೆನಕ ॥೧॥ (ಕುಮಾರ ವಿಜಯ)

ಭಜಿಸುವೆ ಶ್ರೀಗಣನಾಯಕ।
ಗಜಮುಖ ಸಿದ್ಧಿವಿನಾಯಕ॥
ರಜತ ಗಿರೀಶನ ಬಾಲಕ।
ತ್ರಿಜಗದೊಡೆಯ ಬೆನಕಾ॥೧॥ (ಶ್ವೇತ ಕುಮಾರ ಚರಿತ್ರೆ)

ಪ್ರಸಂಗದ ಕೊನೆಯಲ್ಲಿ ಬರುವ ನಿವೇದನಾ ಪದ್ಯದಲ್ಲೂ ಸಾಮ್ಯತೆಯಿರುವುದನ್ನು ಕಾಣಬಹುದು.ಎರಡೂ ಕೃತಿಗಳಲ್ಲಿ ಸೌರಾಷ್ಟ್ರ ತ್ರಿವುಡೆಯಲ್ಲಿದೆ.

ಕನ್ನಡದ ನುಡಿಯೆಂದು ಪೇಕ್ಷಿಸ।
ದಿನ್ನಿದನು ಪ್ರಾಚುರ್ಯಗೊಳಿಸುವ।
ಕನ್ನಡಿಗರನು ಪೊರೆವ ಶಂಕರ।
ಕಣ್ಣ(ನ್ನ)ಡಿಗನು॥

(ಕುಮಾರವಿಜಯ)

ಕನ್ನಡದ ಸೇವೆಯಿದೆನುತ್ತಲಿ।
ಕನ್ನಡಿಗರಭಿಮಾನದಿಂದಲಿ
ಮನ್ನಿಸಿದರಾನ್ ಗೈದುದಕೆ ಸಂ।
ಪನ್ನನಾದೆ॥

(ಶ್ವೇತ ಕುಮಾರ ಚರಿತ್ರೆ)

ಯಕ್ಷಗಾನವೆಂದರೆ ಕಾಳಗವೆಂದು,ಯುದ್ಧವೆಂದು ಬಹಳಜನ ಸರಳವಾದ ತೀರ್ಮಾನಗಳನ್ನು ಕೊಡುವುದಿದೆ. ಯಕ್ಷಗಾನವೆಂದರೆ ಕಾಳಗ ಮತ್ತು ಕಲ್ಯಾಣ ಅಥವಾ ಕಾಳಗಕ್ಕಾಗಿ ಕಲ್ಯಾಣ, ಕಲ್ಯಾಣಕ್ಕಾಗಿ ಕಾಳಗ ಎಂಬ ಸರಳ ತೀರ್ಮಾನಗಳು ಹಲವರಲ್ಲಿದೆ.ಅದು ಸರಿಯಾಗಿ ತಿಳಿಯದೇ ಕೊಡುವ ಅವಸರದ ತೀರ್ಮಾನ. ಯಕ್ಷಗಾನ ಅನಾವರಣಗೊಳಿಸುವ ಸೂಕ್ಷ್ಮ ಪ್ರಪಂಚವನ್ನು ಅರಿಯದೇ ನೀಡುವ ಪ್ರತಿಕ್ರಿಯೆ. ಯಕ್ಷಗಾನದಲ್ಲಿ ಯುದ್ಧ ಎಂಬುದು ಕಥೆಯ ನಡುವೆ ಪ್ರೇಕ್ಷಕರನ್ನು ಹುರಿದುಂಬಿಸುವುದಕ್ಕಾಗಿ ಬರುವ ಸನ್ನಿವೇಶಗಳಷ್ಟೇ. ಶೃಂಗಾರ,ಕರುಣ ಮತ್ತು ಹಿತೋಪದೇಶ ನೀಡುವಿಕೆಗೆ ಮುಖ್ಯ ಒತ್ತು. ಮುದ್ದಣನಲ್ಲಿ ಶೃಂಗಾರ ಸನ್ನಿವೇಶಕ್ಕೆ ಹೆಚ್ಚಿನ ಒತ್ತು. ವಿಷ್ಣುಭಟ್ಟರ ಕೃತಿಗಳಲ್ಲಿ ಶೃಂಗಾರ ಸನ್ನಿವೇಶಗಳು ದಟ್ಟವಾಗಿ ಸಿಗುತ್ತದೆ.

ತ್ರಿಲೊಕ ಸುಂದರಿಯನ್ನು ನೋಡಿದ ಶ್ವೇತಕುಮಾರ ಅವಳನ್ನು ಕುರಿತು ಹೇಳುವ ಮಾತುಗಳನ್ನು ಗಮನಿಸಿ
ರಾಗ: ಯಮುನಾ ಕಲ್ಯಾಣಿ, ಅಷ್ಟತಾಳ
ಇವಳ್ಯಾರಿದರರೆ ಮಂಜುಳಗಾತ್ರೆ।ತ್ರೈ।
ಷ್ಟಭುವನ ಮೋಹಿನಿ ಸಾರಸ ನೇತ್ರೆ॥ಪ॥
ಮೊಗ ಚಂದಿರನ ಬಿಂಬ ಹೊರತಲ್ಲ। ಚೆಲ್ವ।
ನಗೆಯದು ಚಂದ್ರಿಕೆ ಹೊರತಲ್ಲ॥

ಸೊಗಸಿನ ಮುಂಗುರುಳ್ಮರಿದುಂಬಿ। ಬಪ್ಪ।
ಬಗೆ ನೋಡೆ ನಲಿವಳ್ ಯೌವನದುಂಬಿ॥

ಪ್ರಾಸ ಸಹಜವಾಗಿ ಕಾಣಿಸಿಕೊಳ್ಳುವ ಸುಕುಮಾರ ಶೈಲಿಯನ್ನು ಇಲ್ಲಿ ಗಮನಿಸಬಹುದಾಗಿದೆ. ಭಾವಕ್ಕನುಗುಣವಾಗಿ ಪದ್ಯರಚನೆ ಮಾಡುವ ಕೀರಿಕ್ಕಾಡು ಮಾಸ್ತರರ ಸಾಮರ್ಥ್ಯ ಅನ್ಯಾದೃಶ್ಯವಾದುದು. ಖಳನೊಬ್ಬ ಶಿವೆಯನ್ನು ಅಪಹರಿಸಿದನೆಂದು ತಿಳಿದಾಗ ಶ್ವೇತಕುಮಾರ ದು:ಖದ ಉಮ್ಮಳದಲ್ಲಿ ಹೇಳುವ ಮಾತು ನೀಲಾಂಬರಿ ತ್ರಿವುಡೆಯಲ್ಲಿ ಬಂದ ಬಗೆಯನ್ನು ಗಮನಿಸಿ.

ಹಾঃ ರಮಣೀ ಮಣಿಯೆ। ಮಂಜುಳ ರತ್ನ।ಹಾರೆ ಮೋಹದ ಕಣಿಯೇ॥
ಮಾರನ ಕೈಯ ಕ।ಠಾರಿ ವೈಯಾರಿ ವಿ।ಚಾರಿ ಮನೋಹರಿ।ಸಾರ ಮಂಗಲಕರಿ॥೧॥

ಶ್ವೇತಕುಮಾರನಿಗೆ ಆತನ ರಮಣಿ ತನ್ನ ರತ್ನಹಾರದಂತೆ ಮಂಜುಳವಾಗಿ ಶೋಭಿಸುವಳು ಯಾವಾಗಲೂ ತನ್ನನ್ನು ಅಗಲದೇ ಬೆಸೆದುಕೊಂಡಿರುವವಳು ಎಂಬರ್ಥವೂ 'ರತ್ನಹಾರೆ' ಎಂಬ ಪದದಲ್ಲಿದೆ.ಅವಳು ತತ್ಕಾಲಕ್ಕೆ ಮಾತ್ರ ಮೋಹವನ್ನುಂಟು ಮಾಡುವವಳಲ್ಲ.ಆಕೆ ಮೋಹದ ಕಣಿಯೇ ಆಗಿದ್ದಾಳೆ. ಎಂಥ ಶಕ್ತಿವಂತನನ್ನೂ ಮೋಹದಿಂದ ಸೆಳೆಯಬಲ್ಲ, ಇರಿಯಬಲ್ಲ ಮಾರನ ಕೈಯ ಕಠಾರಿಯವಳು.ಇದು ಬಲು ಸೊಗಸಾದ ವರ್ಣನೆ. ಇಲ್ಲಿ ಬರುವ ವಿಚಾರಿ ಮನೋಹರಿ ಎಂಬುದನ್ನು ರಾಘವ ನಂಬಿಯಾರರು ಹೀಗೆ ವ್ಯಾಖ್ಯಾನಿಸಿದ್ದಾರೆ." ಇಲ್ಲ ಬರುವ ಈ ವಿಶೇಷಣದಲ್ಲಿ ಶಿವೆಯದು ಅಂಗಸೌಷ್ಠವದ,ಅವಯವದ ಸೌಂದರ್ಯ ಮಾತ್ರ ಅಲ್ಲ.ಆಕೆಯಲ್ಲಿ ಅಮೂಲ್ಯವಾದ ವಿಚಾರ ಸೌಂದರ್ಯವೂ ಇದೆ.ಇಂಥ ಒಬ್ಬಳನ್ನು ಸಾರ ಮಂಗಲಕಾರಿ ಎಂದಲ್ಲದೇ ಕರೆಯುವ ಬಗೆ ಉಂಟೇ?" ಈ ರೀತಿಯ ವಿಶೇಷತೆಯನ್ನು ಕೀರಿಕ್ಕಾಡು ವಿಷ್ಣು ಮಾಸ್ತರರು ತಮ್ಮ ಪ್ರಸಂಗಗಳಲ್ಲಿ ತಂದಿರುವುದರಿಂದ ಇದಕ್ಕೆ ಅಷ್ಟು ಗೌರವ.

ಕೀರಿಕ್ಕಾಡು ಮಾಸ್ತರರು ತಮ್ಮ ಇಪ್ಪತ್ತನೇ ವಯಸ್ಸಿನಲ್ಲೇ ಇಷ್ಟೊಂದು ಮಹತ್ವದ ಪ್ರಸಂಗವನ್ನು ಬರೆದಿದ್ದಾರೆ ಎಂದಾಗ ಅವರ ಪ್ರತಿಭೆಯ ಮಹತ್ತು ಏನು ಎಂಬುದು ಗೊತ್ತಾಗುತ್ತದೆ. ವಸ್ತುವಿನ ಆಯ್ಕೆಯಲ್ಲಿ,ನಿರೂಪಣಾ ವಿಧಾನದಲ್ಲಿ, ಭಾಷಾ ಬಳಕೆಯಲ್ಲಿ ಸೋಪಜ್ಞತೆಯನ್ನು ಮೆರೆದಿದ್ದಾರೆ ಎನ್ನುವುದಕ್ಕೆ ಈ ಪ್ರಸಂಗದಲ್ಲಿ ಸಾಕಷ್ಟು ಆಧಾರಗಳಿವೆ.ಇದಲ್ಲದೇ ಇನ್ನೂ ಅನೇಕ ಪೌರಾಣಿಕ ಪ್ರಸಂಗಗಳಲ್ಲಿ ತಮ್ಮ ಅನನ್ಯತೆಯನ್ನು ಮಾಸ್ತರರು ತಂದಿದ್ದಾರೆ. ಉದಾಹರಣೆಗೆ ಸೀತಾಪರಿತ್ಯಾಗ ಪ್ರಸಂಗವನ್ನು ಗಮನಿಸಬಹುದು.

ಲಕ್ಷ್ಮೀಶನ ಸೀತಾಪರಿತ್ಯಾಗದ ಕಥಾಭಾಗ ಎಲ್ಲರಿಗೂ ಪರಿಚಿತ.ಆದರೆ ಕೀರಿಕ್ಕಾಡು ವಿಷ್ಣು ಮಾಸ್ತರರ ಪ್ರಸಂಗದಲ್ಲಿ ಹೊಸ ಕಲ್ಪನೆಯಿದೆ.ರಜಕಿ ತುರ್ತಾಗಿ ತವರು ಮನೆಗೆ ಹೋಗಲು ಕಾರಣ

"ತಂದೆ ತಾಯಾರೋಗ್ಯ ಕುಂದಿದೆನು ತಾ।
ಬಂದೋರ್ವನೆನಗಿಲ್ಲ ಸಂದೇಶವಿತ್ತಾ।
ಎಂದತ್ತಲೈದಿದೆ..."ಎನ್ನುತ್ತಾಳೆ.ಹಾಗಾಗಿ ಗಂಡನಲ್ಲಿ ಹೇಳಹೋಗುವಷ್ಟು ಸಮಯಾವಕಾಶ ಇರಲಿಲ್ಲ. ಆದರೆ ರಜಕ ಕೋಪಿಸಿದನು.ಸೀತೆಯ ಬಯಕೆಯಂತೆ ಕಾಡಿಗೆ ಕಳುಹಿಸುವಾಗ ಕೌಸಲ್ಯೆ ಹರಸುವುದು "ಕುಶಲವತಿಯಾಗೈದಿ ಬಾರೆಂದೊಸಗೆಯಿಂ ಪರಸುತ್ತಾ"ಳೆ ಎಂಬ ಮಾತು ಧ್ವನಿಪೂರ್ಣವಾಗಿದೆ.

'ರಾಮನು ಸೀತೆಯನ್ನು ಕಾಡಿಗೆ ಕಳುಹಿಸುವ ವಿಚಾರ ವಾಲ್ಮೀಕಿಗೆ ಮೊದಲೆ ಗೊತ್ತಿತ್ತು.ಆದುದರಿಂದಲೇ ಲಕ್ಷ್ಮಣ ಸೀತೆಯನ್ನು ಕಾಡಿನಲ್ಲಿ ವಾಲ್ಮೀಕಿ ಮಹರ್ಷಿಗಳ ಆಶ್ರಮದ ಹತ್ತಿರದಲ್ಲೇ ಬಿಟ್ಟು ಹೋಗುತ್ತಾನೆ,ಸ್ವಲ್ಪವೇ ಹೊತ್ತಿನಲ್ಲಿ ವಾಲ್ಮೀಕಿ ಮಹರ್ಷಿಗಳು ಬಂದು ಸೀತೆಯನ್ನು ಆಶ್ರಮಕ್ಕೆ ಕರೆದುಕೊಂಡು ಹೋಗುತ್ತಾರೆ. ಈ ವಿಶಿಷ್ಠ ಸಂಗತಿಯನ್ನು ತಮ್ಮ ಪ್ರಸಂಗದಲ್ಲಿ ತರುವುದರ ಮೂಲಕ ಕೀರಿಕ್ಕಾಡು ಮಾಸ್ತರರು ಹೊಸತನವನ್ನು ತಂದಿದ್ದಾರೆ'.[೭]

ಮಾಸ್ತರರ ಇನ್ನೊಂದು ಮಹತ್ವದ ಪ್ರಸಂಗ ಕಥಾಸರಿತ್ಸಾಗರದೊಳಗಣ ಯಕ್ಷಗಾನ ಮೃಗಾವತೀ ಪರಿಣಯ ಅಥವಾ ವೀರ ಸಹಸ್ರಾನೀಕ. ವಿಶಿಷ್ಟವಾದ ಆದರೆ ಅಷ್ಟು ಜನಪ್ರಿಯವಲ್ಲದ ಪ್ರಸಂಗವಿದು. ಸಾಹಿತ್ಯಕ ಸಂಗತಿಗಳು ಹೆಚ್ಚಾಗಿರುವ ಕೃತಿಯಿದು.

ದೇವಲೋಕದಲ್ಲಿ ಇಂದ್ರನ ಒಡ್ಡೋಲಗ. ದೇವತೆಗಳೆಲ್ಲಿ ದಿಕ್ಪಾಲಕ ಅಗ್ನಿ,ವಾಯು ಇವರ ಧೈರ್ಯ, ಆಶ್ವಾಸನೆಯಿಂದ ಇಂದ್ರನಿಗೆ ನೆಮ್ಮದಿಯಾಗುತ್ತದೆ.ಮತ್ತೆ ಶೋಣಿತಾಪುರದ ದೈತ್ಯರಾಜ ಯಮದೌಂಷ್ಟ್ರನ ಒಡ್ಡೋಲಗ. ಮಂತ್ರಿ ದುರ್ಜಯ, ಸೇನಾಧಿಪತಿ ಪ್ರಲಂಭರ ವೀರಾವೇಶದ ಮಾತು.

ದೇವಲೋಕಕ್ಕೆ ರಾಕ್ಷಸರು ದಾಳಯಿಡುತ್ತಾರೆ.ಇಂದ್ರನಿಗೆ ಸೋಲಾಗುತ್ತದೆ.ದೇವೇಂದ್ರ ಚಿಂತೆಯಲ್ಲಿರಲು ಮಾತಲಿಯ ಆಗಮನ.ಯಮದೌಂಷ್ಟ್ರನನ್ನು ಚಂದ್ರವಂಶದ ಶತಾನೀಕನಿಂದ ಗೆಲ್ಲಬಹುದೆಂಬ ಸಲಹೆ ಮಾತಲಿಯಿಂದ ಸಿಗುತ್ತದೆ.ದೇವೇಂದ್ರನ ಅನುಮತಿಯಂತೆ ಮಾತಲಿಯ ಪ್ರಯಾಣ.ಶತಾನೀಕ ರಾಜನು ಕೌಶಾಂಭಿಯಲ್ಲಿ ಒಡ್ಡೋಲಗದಲ್ಲಿದ್ದಾಗ ಮಾತಲಿಯು ಅಲ್ಲಿಗೆ ಪ್ರವೇಶಿಸುತ್ತಾನೆ. ಮಾತಲಿಯಿಂದ ವಿಷಯ ತಿಳಿದ ಶತಾನೀಕ ರಾಜ್ಯಾಧಿಕಾರವನ್ನು ಪುತ್ರ ಸಹಸ್ರಾನೀಕನಿಗೆ ನೀಡಿ ದೇವಲೋಕಕ್ಕೆ ಮಾತಲಿಯೊಡನೆ ಬರುತ್ತಾನೆ.ಯಮದಂಷ್ಟ್ರನಿಂದ ಶತಾನೀಕನ ಸಾವು ಸಂಭವಿಸುತ್ತದೆ. ಮಾತಲಿಗೆ ಚಿಂತೆಯಾಗುತ್ತದೆ. ಕೌಶಾಂಭಿಗೆ ಶವದೊಂದಿಗೆ ಮರಳುತ್ತಾನೆ.ವಿಚಾರ ತಿಳಿದ ಶತಾನೀಕನ ಪತ್ನಿ ಸಹಗಮನ ಮಾಡುತ್ತಾಳೆ.

ಇದರಿಂದ ಸಹಸ್ರಾನೀಕನಿಗೆ ವಿಪರೀತ ಸಿಟ್ಟಿನಿಂದ ದೇವಲೋಕಕ್ಕೆ ತೆರಳ ರಾಕ್ಷಸರ ಸಂಹಾರ ಮಾಡುತ್ತಾನೆ. ದೇವೇಂದ್ರನಿಗೆ ಸಂತೋಷವಾಗಿ ರಂಭಾದಿಗಳಿಂದ ನೃತ್ಯ ನಡೆಯುತ್ತದೆ. ಸಹಸ್ರಾನೀಕನು ತನ್ನ

ಆದಿ ವೃತ್ತಾಂತವನ್ನು ತಿಳಿದು ಹಿಂದಿರುಗುವನು. ಆಗ ತಿಲೋತ್ತಮೆ ಅವನಲ್ಲಿ ಪ್ರಾಣ ಭಿಕ್ಷೆಯನ್ನು ಬೇಡುತ್ತಾಳೆ.ಸಹಸ್ತ್ರಾನೀಕನು ತಿರಸ್ಕರಿಸುತ್ತಾನೆ. ಅದಕ್ಕೆ ಆಕೆ ಹದಿನಾಲ್ಕು ವರ್ಷ ಸತೀವಿಯೋಗ ಆಗುವಂತೆ ಶಾಪ ಕೊಡುತ್ತಾಳೆ.

ಅಯೋಧ್ಯೆಯ ಕೃತವರ್ಮನ ಸುತೆಯಾದ ಮೃಗಾವತಿಯೊಂದಿಗೆ ಮದುವೆ ಪ್ರಸ್ತಾಪಕ್ಕೆ ಮಂತ್ರಿ ಯುಗಂಧರನನ್ನು ಸಹಸ್ತ್ರಾನೀಕ ಕಳುಹಿಸುತ್ತಾನೆ.ಕೃತವರ್ಮನ ಒಡ್ಡೋಲಗ.ಮಗಳ ಮದುವೆಗೆ ಆತನ ಒಪ್ಪಿಗೆ ಸಿಗುತ್ತದೆ. ಮದುವೆಯಾಗಿ ಗರ್ಭಿಣಿಯಾದ ಮೃಗಾವತಿಗೆ ರಕ್ತವರ್ಣದ ಕೊಳದಲ್ಲಿ ಸ್ನಾನ ಮಾಡುವ ಬಯಕೆ. ಅದರಂತೆ ಸ್ನಾನ ಮಾಡುತ್ತಿರುವಾಗ ಮಾಂಸವೆಂದು ಬ್ರಮಿಸಿ ಗರುಡೋತ್ಪನ್ನ ಪಕ್ಷಿಯು ಆಕೆಯನ್ನು ಕೊಂಡೊಯ್ಯುವುದು. ಇದನ್ನು ತಿಳಿದ ಸಹಸ್ತ್ರಾನೀಕ ದುಗುಡ ಕೋಪೋದ್ರೇಕದಿಂದ ಗರುಡ ಲೋಕದ ಮೇಲೆ ಕೋಪಗೊಳ್ಳುತ್ತಾನೆ. ಆಗ ಅಶರೀರವಾಣಿ ಇದು ತಿಲೋತ್ತಮೆಯ ಶಾಪದ ಫಲವೆಂದು ಹೇಳುತ್ತದೆ.

ತಾನು ಹೊತ್ತು ತಂದಿರುವುದು ಹೆಣ್ಣು ಎಂದು ಗೊತ್ತಾದಾಗ ಪಕ್ಷಿ ಆಕೆಯನ್ನು ಉದಯ ಪರ್ವತದಲ್ಲಿ ಬಿಟ್ಟು ಹೋಗುತ್ತದೆ.ಪರ್ವತದಲ್ಲಿ ಮೃಗಾವತಿ ಚಿಂತಿತಳಾಗುತ್ತಾಳೆ.ಜಮದಗ್ನಿಯ ಶಿಷ್ಯ ಬಂದು ಅವಳ ಅಳಲಿನ ಅಂತರಾಳವನ್ನು ತಿಳಿದು ಆಶ್ರಮಕ್ಕೆ ಕೊಂಡೊಯ್ಯುತ್ತಾನೆ.ಅಲ್ಲೇ ಅವಳಿಗೆ ಗಂಡು ಮಗು ಜನನ. ಉದಯನನೆಂದು ನಾಮಕರಣ.ಕೆಲವು ವರ್ಷ ಅಲ್ಲೇ ಇದ್ದು ಒಂದು ದಿನ ಪತಿ ನಾಮಾಂಕಿತ ಕಡಗವನ್ನು ಮಗನಿಗೆ ತೊಡಿಸುತ್ತಾಳೆ.ಉದಯನನ ವನವಿಹಾರ ಮೃಗಬೇಟೆ.ಶಬರನಿಂದ ವಸುನೇಮಿಯೆಂಬ ಸರ್ಪದ ಬಂಧನ.ಇದು ಸರಿಯಲ್ಲವೆಂದು ಉದಯನನ ಸೂಚನೆ.ಬಿಡಲಾರೆನೆಂದು

ಶಬರ. ಬಿಡಬೇಕೆಂದು ಉದಯನನ ಹಟ.ಕೇಳಿದ್ದನ್ನು ಕೊಟ್ಟರೆ ಬಿಡುವೆನೆಂದ ಶಬರನಿಗೆ ಅವನ ಅಪೇಕ್ಷೆಯಂತೆ ಕೈಯ ಕಡಗವನ್ನು ಕೊಟ್ಟು ವಸುನೇಮಿಯ ಬಿಡುಗಡೆ. ವಸುಮತಿಯಿಂದ ಘೋಷವತಿಯೆಂಬ ವೀಣೆಯ ಕೊಡುಗೆ. ಉದಯನನ ಆಶ್ರಮಕ್ಕೆ ಬರುವುದು. ಅದೇ ಕಾಡಿಗೆ ಸಹಸ್ತ್ರಾನೀಕ ಮೃಗ ಬೇಟೆಗಾಗಿ ಬರುವುದು.ಇದಿರಾದ ಶಬರನ ಕೈಯಲ್ಲಿ ತನ್ನ ಕಡಗವನ್ನು ನೋಡಿ ಯುದ್ಧ.ಶಬರನ ಸೋಲು.ಅಲ್ಲಿಂದ ಆಶ್ರಮಕ್ಕೆ ಬಂದ ಸಹಸ್ತ್ರಾನೀಕ ಋಷಿಗಳ ಅನುಜ್ಞೆಯಂತೆ ಪತ್ನಿ ಪುತ್ರರೊಂದಿಗೆ ರಾಜ್ಯಕ್ಕೆ ಹೊರಟು ಹೋಗುವುದು.

ದಾರಿಯಲ್ಲಿ ಹಿಮಾದ್ರಿಯ ಹುಂಬ-ಹಂಬಾಸುರರು ತಡೆದು ಯುದ್ಧ. ಯುದ್ಧದಲ್ಲಿ ಸಹಸ್ತ್ರಾನೀಕನಿಗೆ ಸೋಲು. ಅಂಬರ ವಾಣಿಯಂತೆ ರಂಭೆಯ ನೆವನದಿಂದ ತಮ್ಮೊಳಗೇ ಬಡಿದಾಡಿಕೊಂಡು ಖಳರೀರ್ವರೂ ಸಾಯಬೇಕೆಂದು ನೆನೆದು ಉದಯನನ ವೀಣೆಯನ್ನು ಸಹಸ್ತ್ರಾನೀಕ ನುಡಿಸುವನು.ರಂಭೆ ಪ್ರತ್ಯಕ್ಷ.ಆಕೆಯ ನೃತ್ಯ ನೋಡಿದ ಅಸುರರು ಅವಳನ್ನು ಮೋಹಿಸಿ ಅವರೊಳಗೇ ಅಭಿಪ್ರಾಯ ಭೇದ ಉಂಟಾಗಿ ರಂಭೆಯಲ್ಲಿ

ಕೇಳುವುದು.ಪರಾಕ್ರಮಿಗಳನ್ನು ವರಿಸುವುದಾಗಿ ಹೇಳಿದ ರಂಭೆಯ ಮಾತು ಕೇಳಿ ಇಬ್ಬರೂ ಪರಸ್ಪರ ಬಡಿದಾಡಿಕೊಂಡು ಸಾಯುತ್ತಾರೆ.ಸಹಸ್ರಾನೀಕ ರಾಜ್ಯವನ್ನು ಪ್ರವೇಶಿಸುತ್ತಾನೆ.

ಇದು ಕಥೆ.ರೋಚಕ ತಿರುವುಗಳಿಂದ ಈ ಪ್ರಸಂಗ ರಂಗದಲ್ಲಿ ಕುತೂಹಲವನ್ನು ಉಳಿಸಿಕೊಳ್ಳುತ್ತದೆ. ಹಾಸ್ಯ, ವೀರ, ಕರುಣಗಳಿಗೆ ಸಾಕಷ್ಟು ಅವಕಾಶಗಳು ಈ ಪ್ರಸಂಗದಲ್ಲಿವೆ.ಶ್ವೇತ ಕುಮಾರ ಚರಿತ್ರೆಗಿಂತಲೂ ಈ ಪ್ರಸಂಗದಲ್ಲಿ ಮಾಸ್ತರರು ಬಳಸುವ ಭಾಷೆ ಸರಳವಾಗಿದೆ. ಉದಾ. ಜಮದಗ್ನಿಯ ಶಿಷ್ಯ ಪರ್ವತದಲ್ಲಿ ಸಿಕ್ಕದ ಗರ್ಭಿಣಿ ಮೃಗಾವತಿಯನ್ನು ಮಾತನಾಡಿಸುವ ಪದ್ಯ ಸರಳವಾಗಿದ್ದು,ಆತ್ಮೀಯವಾಗಿದೆ.

ಯಾರಮ್ಮಾ।ನೀನು।ಯಾರಮ್ಮಾ॥ಪ॥
ಯಾರಮ್ಮ ನೀ ನಿನ್ನದೇಶವದೆಲ್ಲಿ।
ಯಾರ ಮಗಳು ಕಾಂತನೆಲ್ಲಿಹನಿಲ್ಲಿ।
ನಾರಿಯೋರ್ವಳೆ ಬರಲಿಹುದೇನು ಕಾರ್ಯ।
ಮೋರೆ ಬಾಡಿದೆ ಚಿಂತೆಯೇನು ಪೇಳ್ವಗೆಯ॥ಗ॥
ಜಮದಗ್ನಿ ಶಿಷ್ಯನಾಗಿಹೆ ನಾನು ಬಳಿಯೆ।
ಯಮಿಪನಾಶ್ರಮವಿದೆ ಕಪಟವ ತಿಳಿಯೆ।
ಕಮಲನೇತ್ರೆಯೆ ಬರಬಹುದತ್ತ ನಿನಗೆ॥

ಪ್ರಸಂಗ ಕೃತಿ ಎಂದರೆ ಅದು ಹಾಡುಗಬ್ಬರೂಪದ ಒಂದು ನಾಟಕ ಕೃತಿ ಮಾತ್ರವಲ್ಲ, ಅದು ಕೃತಿಕಾರನ ಸಾಂಸ್ಕೃತಿಕ ವ್ಯಕ್ತಿತ್ವವನ್ನೂ ತೋರುವ ನಿಲುಗನ್ನಡಿಯೂ ಹೌದು.ಕೃತಿಕಾರನ ವ್ಯಕ್ತಿತ್ವ ಹೆಚ್ಚು ಎತ್ತರಕ್ಕೆ ಹೋಗದಿದ್ದರೆ ಆತನ ನೋಟಕ್ಕೆ, ಅಭಿವ್ಯಕ್ತಿಗೆ ಹೆಚ್ಚಿನ ವಿಸ್ತಾರ, ವ್ಯಾಪಕತೆಯೋ ಬರಲಾರದು.ಕೀರಿಕ್ಕಾಡು ಅವರ ಕೃತಿಗಳು ಈ ಬಗೆಯ ಸಂಕೋಚಕ್ಕೆ ಆಸ್ಪದ ನೀಡಲಿಲ್ಲ.ಒಳ್ಳೆಯ ಹಾರೈಕೆ, ಸ್ವಚ್ಛ ಅಭಿರುಚಿ ಅವರದಾಗಿತ್ತು.

ಶ್ವೇತ ಕುಮಾರ ಚರಿತ್ರೆಯಲ್ಲಿ ರತ್ನಶೇಖರ ದೊರೆಯನ್ನು ಕಾದಿ ಕೊಂದ ಶಬರ

‘ಸಾಕು,ದುಃಖಿಸದೇ ನಡೆ,ಮುಂದಿನ ಕೆಲಸ ನೋಡು"

ಎಂದಾಗ ಬಂದ ಮಂತ್ರಿ ಹೀಗೆ ಉದ್ಗರಿಸುತ್ತಾನೆ.

"ಖಳನಾದರೂ ನುಡಿ। ಯೊಳು ತಿಳಿವಿನ ಹೊನ।

ಳಿಳಹುದೆನುತಲರಿತೆದ್ದಾಗ..".

ತಿಳಿವಿನ ಹೊನಲು ಇಳಿಯುವಂಥ ಮಾತೊಂದು ಯಾರ ಬಾಯಿಂದ ಬಂದರೇನು? ಖಳನಾದರೇನು? ಮಗುವಾದರೇನು? ಇದು ವಿಷ್ಣು ಮಾಸ್ತರರ ಅಂತರ್ಯ.ಅದು ಅವರ ಪ್ರಸಂಗಗಳಲ್ಲಿ ಕಾಣಿಸಿಕೊಂಡಿದೆ.

ಒಂದು ಉತ್ತಮ ಪ್ರಸಂಗದಲ್ಲಿ ಇರಲೇಬೇಕಾದ ಎಲ್ಲ ಲಕ್ಷಣಗಳನ್ನು ಮಾಸ್ತರರ ಪ್ರಸಂಗಗಳಲ್ಲಿ ಕಾಣಬಹುದು.ಒಬ್ಬ ಪಾತ್ರಧಾರಿಯಾಗಿಯೂ ರಂಗನಿರ್ದೇಶಕರಾಗಿಯೂ ಅವರು ಆರ್ಜಿಸಿದ ಅನುಭವಗಳು ಅವರ ಪೌರಾಣಿಕ ಪ್ರಸಂಗಗಳ ಯಶಸ್ಸಿಗೆ ಕಾರಣವಾಗಿದೆ. ಸಂಭಾಷಣೆಯನ್ನು ಪ್ರಸಂಗದಲ್ಲಿ ಎಷ್ಟು ಚೆನ್ನಾಗಿ ತರುತ್ತಾರೆ ಎಂಬುದಕ್ಕೆ ಅವರ 'ಜರಾಸಂಧ ಪರಾಭವ' ಎಂಬ ಪ್ರಸಂಗದ ಒಂದು ಭಾಗವನ್ನು ನೋಡಬಹುದು.

ಕೃಷ್ಣ: ಭಳಿರೆ ಭಲೆ ಶಿಶುಪಾಲ। ತಿಳಿದೆನತ್ತೆಯ ಬಾಲ।
ಬಲಸಹಿತ ಮಗಧನೊಡನಿಂತು।
ಬಲುಮೆಗಿಳಿದುದು ಬಹಳ।ಕಳವಳವು ಮನಸಿನೊಳ-
ಗುಳಿಸದೆಂಬೆನು ಗ್ರಹಿಸು ನಿಂತು॥

ಶಿಶುಪಾಲ: ಗ್ರಹಿಸಿಯೇ ಬಂದವನು। ಸಹಜನೀ ಬಾಂಧವನು।
ಸಹಿಸೆವಾದರೂ ಕಂಸಗಿರಿದೇ।
ಅಹಿತ ನೀನೇನು ತಾನು। ಸಹಕರಿಸೆ ಮಗಧಗನು
ಗ್ರಹವಿತ್ತೆ ವಿಷಯ ವೆನಗರಿದೆ॥

ಹೀಗೆ ಕಲಹದ ಸಂದರ್ಭದಲ್ಲಿ ಒಬ್ಬರ ಮಾತನ್ನು ಇನ್ನೊಬ್ಬ ಎತ್ತಿ ಹಿಡಿದು ಜರೆದಾಡುವ, ತೆಗಳುವ, ಜಮಗಿಸುವ ರೀತಿ ಹೃದಯಂಗಮವಾಗಿದೆ. ಹೆಚ್ಚಿನ ಪ್ರಸಂಗಗಳಲ್ಲಿ ಈ ರೀತಿಯನ್ನು ಮಾಸ್ತರರು ಅನುಸರಿಸುತ್ತಾರೆ.ಶಿಶುಪಾಲ-ಅತ್ತೆಯ ಬಾಲ, ಬಂದವನು-ಬಾಂಧವನು ಇತ್ಯಾದಿ ಪ್ರಾಸಗಳು ಮಾಸ್ತರರ ಕವಿತ್ವದ ವಿಶಿಷ್ಟ ಸೊಗಸುಗಾರಿಕೆ ಎನ್ನಬಹುದು.

ದ್ರೋಣಾಚಾರ್ಯರು ಬಲಿದ ಪದ್ಮವ್ಯೂಹವನ್ನು ಭೇದಿಸಿ ಗೆದ್ದು ಬರುವವರು ಯಾರಿದ್ದಾರೆ ಎಂದು ಧರ್ಮರಾಯನು ಚಿಂತಿಸುತ್ತಿರುವಾಗ ಅಭಿಮನ್ಯು ಬಂದು ಹೇಳುವ ಮಾತುಗಳು ಹೀಗಿವೆ.

ಬಿಡಿಬಿಡಿ ಚಿಂತೆಯ । ಕೊಡಿಕೊಡಿರಪ್ಪಣೆ।
ಜಡವ್ಯೂಹವನು।
ಕೆಡಹುವೆ ಬೊಪ್ಪನೆ ಮೃಢನಡ್ಡೈಸಲು
ದೃಢಗೆಡೆ ಕಾದುವೆನು॥೧॥

ದ್ರೋಣಾದ್ಯರ ಸುತ್ರಾಣವ ಕುಗ್ಗಿಪೆ
ಕಾಣಿಪೆ ಮಮ ಶೌರ್ಯ
ಬಾಣವ ತೆಗೆದರೆ ಕ್ಷೋಣಿಯೆ ಬೆದರುಗು
ಮಾಣಿನಿಹುದು ಧೈರ್ಯ॥೨॥

ಪಾರ್ಥನವರ ಜಯ ಕೀರ್ತಿಗೆ ನಿರ್ಭಯ
ಸ್ಫೂರ್ತಿಯ ಕಳೆಯೀವೆ
ಅರ್ತಿಯೊಳಪ್ಪಣೆಯಿತ್ತರೆ ಕಾಂಬಂ
ಕ್ಷತ್ರಿಯತನ ತಾವೆ॥೩॥

(ವೀರ ಅಭಿಮನ್ಯು)

ದ್ರೋಣನ ಪಾತ್ರವನ್ನೂ,ಅಭಿಮನ್ಯುವಿನ ಪಾತ್ರವನ್ನೂ ಹಾಗೆಯೇ ಧರ್ಮರಾಯನ ಪಾತ್ರವನ್ನೂ ನಿರ್ವಹಿಸಿ ಸಾಕಷ್ಟು ಅನುಭವವುಳ್ಳ ಮಾಸ್ತರರು ಈ ಪ್ರಸಂಗದಲ್ಲಿ ತನ್ನದೇ ಶೈಲಿಯಲ್ಲಿ ಇಲ್ಲಿನ ಪದ್ಯಗಳನ್ನು ರಚಿಸಿದ್ದಾರೆ.

ಕೀರಿಕ್ಕಾಡು ಮಾಸ್ತರರ ಪೌರಾಣಿಕ ಪ್ರಸಂಗಗಳಲ್ಲಿ ಶ್ವೇತಕುಮಾರ ಚರಿತ್ರೆ, ಕಚೋಪಖ್ಯಾನ, ಮೃಗಾವತೀ ಪರಿಣಯ,ಗೌತಮ ವಿಜಯ ಮೊದಲಾದವು ಪ್ರಮುಖ.ಅವರ ಪೌರಾಣಿಕ ಪ್ರಸಂಗಗಳಲ್ಲಿ

ಪುರಾಣ ಕಥೆಯನ್ನು ಪ್ರಸಂಗವಾಗಿಸುವಲ್ಲಿ ಅದನ್ನು ಯಕ್ಷಗಾನೀಯವಾದ ದೃಶ್ಯಕಾವ್ಯವಾಗಿಸುವಲ್ಲಿ ಮಾಸ್ತರರ ಕಲಾವಂತಿಕೆ ಅನನ್ಯವಾದುದು.ಅವರ ಕೃತಿಗಳಲ್ಲಿ ನಿರಾಯಾಸವಾಗಿ ಬರುವ ಪ್ರಾಸಾನುಪ್ರಾಸಗಳ ವೈಭವ ಅಸಾಧಾರಣವಾದುದು. ಸರಳವಾದ, ಸಹಜವಾದ ಮತ್ತು ಅಷ್ಟೇ ಸುಂದರವಾದ ಸ್ವಾರಸ್ಯವಾದ ಪದಗಳ ಜೋಡಣೆ, ಸನ್ನಿವೇಶ ಸಂದರ್ಭಗಳ ಸಂಯೋಜನೆ,ಪ್ರದರ್ಶನ ಕಾಲಕ್ಕೆ ಅನುಗುಣವಾದ ರೀತಿಯಲ್ಲಿ ಪಾತ್ರಗಳ ಪೋಷಣೆ,ರಸೋತ್ಪಾದನೆಗೆ ಅವಕಾಶವಾಗುವಂತೆ ಕಥಾ ನಿರೂಪಣೆ ಅವರ ಬಹುತೇಕ ಪ್ರಸಂಗಗಳ ವಿಶೇಷ ಶಕ್ತಿ.

### ೪.೫ ಕೀರಿಕ್ಕಾಡು ಮಾಸ್ತರರ ಐತಿಹಾಸಿಕ ಮತ್ತು ಇತರ ಪ್ರಸಂಗಗಳು

ಕನ್ನಡ ಸಾಹಿತ್ಯದಂತೆ ಯಕ್ಷಗಾನ ಸಾಹಿತ್ಯದಲ್ಲೂ ಐತಿಹಾಸಿಕ ವಸ್ತುವುಳ್ಳ ಬರವಣಿಗೆ ಬಹು ವಿರಳ. ಕೆಲವು ವೀರರ ವೀರಗಾಥೆಗಳು ಅಲ್ಲೊಂದು ಇಲ್ಲೊಂದು ಪ್ರಸಂಗ ರೂಪದಲ್ಲಿ ಬಂದದ್ದಿದೆ.ಇವುಗಳ ಜೊತೆಯಲ್ಲಿ ಕೆಲವು ಪುಣ್ಯಕ್ಷೇತ್ರಗಳ ಮಹಾತ್ಮೆಯನ್ನು ಸೇರಿಸುವ ಪುರಾಣ ಮತ್ತು ಐತಿಹಾಸಿಕ ಸಂಗತಿಗಳು ಮಿಶ್ರವಾಗಿರುವ ಕೆಲವು ಪ್ರಸಂಗಗಳು ಬಂದಿವೆ.'ಐತಿಹಾಸಿಕ ಯಕ್ಷಗಾನ ಪ್ರಸಂಗಗಳಲ್ಲಿ ಕುಮಾರರಾಮನ

ಚರಿತ್ರೆ,ಸತ್ಯೇಂದ್ರ ಚೋಳ,ರಾಜಾರಾಜಸಿಂಹ ಮುಂತಾದವು ಮುಖ್ಯವಾದವು. ಕ್ಷೇತ್ರ ಮಹಾತ್ಮೆಯಲ್ಲಿ ಬಪ್ಪನಾಡು ಕ್ಷೇತ್ರ ಮಹಾತ್ಮೆ,ಧರ್ಮಸ್ಥಳ ಕ್ಷೇತ್ರ ಮಹಾತ್ಮೆ,ಗೋಕರ್ಣ ಕ್ಷೇತ್ರ ಮಹಾತ್ಮೆ,ಗುರುವಾಯೂರು ಕ್ಷೇತ್ರ ಮಹಾತ್ಮೆ ಮೊದಲಾದವುಗಳು'.[೮]

ಇತರೆ ಪ್ರಸಂಗಗಳಲ್ಲಿ ಮುಖ್ಯವಾದುದು ಸಾಮಾಜಿಕ ಪ್ರಸಂಗಗಳು, ಕಾಲ್ಪನಿಕ ಪ್ರಸಂಗಗಳು,ಜಾಗೃತಿ ಉದ್ದೇಶದ ಪ್ರಸಂಗಗಳು ಮೊದಲಾದವುಗಳು.ಯಕ್ಷಗಾನ ಕ್ಷೇತ್ರದಲ್ಲಿ ಪೌರಾಣಿಕ ಪ್ರಸಂಗಗಳು ಬೇಕಾದಷ್ಟು ಬಂದು ಅಲ್ಲಿ ತರಬಹುದಾದ ಎಲ್ಲ ಸಾಧ್ಯತೆಗಳನ್ನೂ ರಂಗಸ್ಥಳಕ್ಕೆ ತಂದಾಗಿದೆ.ಇಂದು ಬರೆಯುತ್ತಿರುವವನ ಎದುರು ಎರಡು ರೀತಿಯ ಪ್ರಶ್ನೆಗಳಿವೆ.ತಾನು ಪೌರಾಣಿಕ ಕಥೆಗಳಿಗೆ ಹೋಗಬೇಕೇ ಅಲ್ಲ ಪರ್ಯಾಯ ಆಯ್ಕೆಗಳನ್ನು ಯೋಚಿಸಬೇಕೇ ಎಂಬುದು.ಕೆಲವರು ಈ ನಡುವೆ ಸಮತೋಲನದ ದಾರಿಯನ್ನು ಸ್ವೀಕರಿಸಿದರು. ಉದಾ: ಅಮೃತ ಸೋಮೇಶ್ವರ.ಯಾವ ವಸ್ತುವನ್ನು ಪ್ರಸಂಗಕ್ಕೆ ಆಯ್ಕೆ ಮಾಡಬೇಕೆಂಬ ಚಿಂತನೆ ಹೊಸದರ ಕಡೆಗೆ ನೋಡುವಂತೆ ಮಾಡಿತು.ಅದರ ಫಲವೇ ಈ ಪ್ರಸಂಗಗಳು.

ಕಲೆಯೊಂದನ್ನು ತನ್ನ ಕಾಲದ ಬದುಕಿನ ಜತೆಗೆ ಹೆಣೆದು ನೋಡುವ ಬರಹಗಾರ ಸಹಜವಾಗಿಯೇ ಸಾಮಾಜಿಕ ವಸ್ತುಗಳ ಕಡೆಗೆ ವಾಲುತ್ತಾನೆ. ಯಕ್ಷಗಾನದಂತಹ ಪುರಾಣ ಯೋಗ್ಯ ಕಲೆಯೊಂದನ್ನು ಸಾಮಾಜಿಕ ನೆಲೆಯ ಪ್ರಸಂಗಗಳಿಗೆ ಒಳಪಡಿಸುವ ಬಗೆಗೆ ಪರ ವಿರೋಧ

ದನಿಗಳಿದ್ದರೂ ಈ ಪ್ರಸಂಗಗಳು ಸಾಮಾಜಿಕ ಸಾಂಸ್ಕೃತಿಕ ದಾಖಲೆಗಳು ಎನ್ನುವುದನ್ನು ಮರೆಯುವಂತಿಲ್ಲ.

ಯಕ್ಷಗಾನ ಸಾಹಿತ್ಯ ಸೃಷ್ಟಿ ಹೆಚ್ಚಾಗುತ್ತಾ ಹೋದಂತೆ ಕಲ್ಪನೆಯ ಅಂಶಗಳನ್ನು ಕವಿಗಳು ಸೇರಿಸುತ್ತಾ ಹೋದರು.ಇತ್ತೀಚೆಗಿನ ದಿನಗಳಲ್ಲಿ ಈ ರೀತಿಯ ಕಾಲ್ಪನಿಕ ಪ್ರಸಂಗಗಳು ಹೆಚ್ಚಾಗಿ ಬರುತ್ತವೆ.ಕಾಲ್ಪನಿಕ ಪ್ರಸಂಗಗಳಲ್ಲಿ ಗುಣಸುಂದರಿ,ನಾಗಶ್ರೀ,ರೂಪಶ್ರೀ ಮುಂತಾದವು ಪ್ರಸಿದ್ಧಿ ಪಡೆದಿವೆ.

ಕೀರಿಕ್ಕಾಡು ವಿಷ್ಣು ಮಾಸ್ತರರ ಪೌರಾಣಿಕ ಪ್ರಸಂಗಗಳಲ್ಲಿ ಶ್ವೇತಕುಮಾರ ಚರಿತ್ರೆ ಇದ್ದಂತೆ ಐತಿಹಾಸಿಕ ಪ್ರಸಂಗಗಳಲ್ಲಿ 'ಅಮೋಘ ವರ್ಷ ನೃಪತುಂಗ'. ಪ್ರಸಿದ್ಧಿ, ಮೌಲ್ಯ ಎಲ್ಲ ದೃಷ್ಟಿಯಿಂದಲೂ.ಅವರು ಅಮೋಘ ವರ್ಷ ನೃಪತುಂಗ,ರಘುನಾಥ ವಿಜಯ,ರಣಮಲ್ಲ ವಿಜಯ, ಗೌತಮ ವಿಜಯ,ರಾಜವಾಹನ ವಿಜಯ ಮೊದಲಾದ ಐತಿಹಾಸಿಕ ಪ್ರಸಂಗಗಳನ್ನು ರಚಿಸಿದ್ದಾರೆ. ಯಾವುದೇ ಕಲೆಯು ನಿಂತ ನೀರಲ್ಲ ಎಂಬುದಕ್ಕೆ ಮಾಸ್ತರರ ಪ್ರಯೋಗಶೀಲತೆಯೇ ಒಂದು ವ್ಯಾಖ್ಯಾನದಂತಿದೆ.

ಯಕ್ಷಗಾನವು ಪೌರಾಣಿಕ ಕಥೆಗಳನ್ನು ಮಾತ್ರ ಪ್ರದರ್ಶಿಸಬೇಕಾಗಿಲ್ಲ. ಸಹೃದಯಿಗಳಿಗೆ ಇತಿಹಾಸ ಪ್ರಜ್ಞೆಯನ್ನುಂಟು ಮಾಡಬಲ್ಲ ಇಂಥ ಪ್ರಯೋಗಗಳೂ ಬೇಕು. ಪುರಾಣಗಳ ತಿಳುವಳಿಕೆಯಂತೆಯೇ ಇತಿಹಾಸದ ತಿಳುವಳಿಕೆಯೂ ಸಾಮಾಜಿಕರಿಗೆ ಅಗತ್ಯ. ಚಾಣಕ್ಯ, ಚಂದ್ರಗುಪ್ತ ಪುಲಕೇಶಿ,ನೃಪತುಂಗ, ಶ್ರೀಹರ್ಷ, ಪ್ರತಾಪಸಿಂಹ, ಶ್ರೀಕೃಷ್ಣದೇವರಾಯ, ಅಬ್ಬಕ್ಕ, ಶಿವಾಜಿ ಕಿತ್ತೂರು ರಾಣಿ ಚೆನ್ನಮ್ಮ ಮೊದಲಾದ ಕಥೆಗಳು ಯಕ್ಷಗಾನಕ್ಕೆ ಹೊಸ ಆಯಾಮ ತಂದುಕೊಡಬಲ್ಲವು ಎಂದು ಅಮೃತ ಸೋಮೇಶ್ವರರು ಹೇಳುತ್ತಾರೆ.[೬]

ಕೀರಿಕ್ಕಾಡು ವಿಷ್ಣು ಮಾಸ್ತರ್ ಅಮೋಘ ವರ್ಷ ನೃಪತುಂಗ ಎಂಬ ಪ್ರಸಂಗವನ್ನು ಬರೆದು ಪ್ರಸಿದ್ಧಿ ಪಡೆದಿದ್ದಾರೆ,ಕರ್ನಾಟಕದ ಇತಿಹಾಸದಲ್ಲಿ ಒಂಬತ್ತನೇ ಶತಮಾನದಲ್ಲಿದ್ದ ರಾಷ್ಟ್ರಕೂಟ ವಂಶದ ನೃಪತುಂಗನ ಹೆಸರು ಪ್ರಸಿದ್ಧ.ಕನ್ನಡದ ಪ್ರಥಮ ಉಪಲಬ್ಧ ಲಕ್ಷಣಗ್ರಂಥ ಕವಿರಾಜಮಾರ್ಗ ಈತನ ಆಸ್ಥಾನ ಕವಿ ಶ್ರೀವಿಜಯನಿಂದ ರಚಿತವಾದುದು.

ನೃಪತುಂಗನ ರಾಜಾಡಳಿತದ ಸಂದರ್ಭದಲ್ಲಿ ನಡೆದ ಕೆಲವು ಘಟನೆಗಳು ಈ ಪ್ರಸಂಗಕ್ಕೆ ಕಚ್ಚಾವಸ್ತು. ಯಕ್ಷಗಾನದ ಜಾಯಮಾನಕ್ಕೆ ಸಹಜವಾದ ವೀರ, ಶೃಂಗಾರ ಇತ್ಯಾದಿ ರಸಗಳು ಇಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಾಣಿಸಿಕೊಂಡಿದೆ. ರೋಚಕವಾಗಿ ಇಲ್ಲಿನ ಕಥೆಯನ್ನು ಹೆಣೆಯಲಾಗಿದೆ.

ಮಾನ್ಯಖೇಟದ ದೊರೆ ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನ ಒಡ್ಡೋಲಗದಿಂದ ಪ್ರಸಂಗ ಆರಂಭ. ಗುರು ಜಿನಸೇನಾಚಾರ್ಯ,ಮಂತ್ರಿ ಪಾತಾಳಮಲ್ಲ,ದಳಪತಿ ಬಂಕೇಶ ಮೊದಲಾದವರ ಸಹಕಾರ ಪ್ರೀತಿಯಿದ್ದರೂ ರಾಜನಿಗೆ ಪುತ್ರ ಅಮೋಘ ವರ್ಷ ಕೃಷ್ಣನ ಉಚಿತವಲ್ಲದ ರೀತಿಯ ನಡೆವಳಿಕೆಯಿಂದ ಅಶಾಂತಿ. ಮುಂದೆ ಸರಿಯಾದಾನೆಂದು ಮಂತ್ರಿ ಮೊದಲಾದ ಪರಿವಾರದವರ ಸಮಾಧಾನದ ಮಾತುಗಳು. ಕನ್ಯಕುಬ್ಜದ ಅರಸ ಮಿಹಿರ ಭೋಜನಿಗೆ ತಾನು ಮಾನ್ಯಖೇಟದ ಮಾಂಡಲಿಕನಾಗ-ಬೇಕಾದುದರ ಬಗೆಗೆ ಬೇಸರವಿದೆ. ಆತ ತಾನು ಸ್ವತಂತ್ರನಾಗಬೇಕೆಂದು ಆತುರದಿಂದ ಸೇನಾಧಿಪ ಮಕರಂದನ ಮುಂದಾಳ್ತನದಲ್ಲಿ ಲಾಟದ ಗಡಿ ದಾಟಲು ಹವಣಿಸುತ್ತಾನೆ.ಈ ವಿಚಾರವನ್ನು ಗೂಢಚಾರರಿಂದ ಅರಿತ ತಲವನದ ಗಂಗ ದೊರೆ ನೀತಿಮಾರ್ಗನು ದಕ್ಷಿಣದಿಕ್ಕಿನಿಂದ ದಾಳಿಯಿಡಲು ಯೋಚಿಸುತ್ತಾನೆ. ಚಾರರಿಂದ ಪರಸೈನ್ಯ ದಾಳಿಯ ಕುರಿತು ತಿಳಿದ ನೃಪತುಂಗ ಯುದ್ಧದ ವಿಚಾರಕ್ಕೆ ಮುಂದಾಗಲು ಅಮೋಘವರ್ಷ ಕೃಷ್ಣನು ತಾನು ರಣಕಳಕ್ಕೆ ತೆರಳುತ್ತೇನೆ ಎನ್ನುತ್ತಾನೆ. ಆದರೆ ಅದಕ್ಕೆ ಸಮ್ಮತಿಸದ ನೃಪತುಂಗ ಪುರರಕ್ಷಣೆಗೆ ಆತನನ್ನು ನಿಲ್ಲಿಸುತ್ತಾನೆ.ಈ ನಿರ್ಧಾರ ಕೃಷ್ಣನಿಗೆ ಇಷ್ಟವಾಗುವುದಿಲ್ಲ. ಆತ ಸಿಟ್ಟಿನಿಂದ ಸಭಾತ್ಯಾಗ ಮಾಡುತ್ತಾನೆ.

ತನ್ನನು ನಿರ್ಲಕ್ಷಿಸಿ ಬಂಕೇಶನನ್ನು ಸೇನಾಪತಿಯನ್ನಾಗಿ ನಿಯುಕ್ತಗೊಳಿಸಿದ್ದಕ್ಕೆ ಬೇಸರಗೊಂಡ ಚೇದಿರಾಜ ಶಂಕರಗಣನು ನೊಳಂಬ ರಾಜ ಮಂಗಿಯೊಡನೆ ಕೃಷ್ಣನಲ್ಲಿಗೆ ಹೋಗಿ ಅವನ ಮನಸ್ಸನ್ನು ಕೆಡಿಸಲು ಪ್ರಯತ್ನಿಸುತ್ತಾನೆ. ಕೃಷ್ಣನು ಅವನೊಂದಿಗೆ ಚೇದಿಗೆ ತೆರಳುತ್ತಾನೆ.ಚೇದಿರಾಜ ಶಂಕರಗಣನ ತಂಗಿ ಕನಕಾಂಗಿಯನ್ನು ಉಪವನದಲ್ಲಿ ಕಂಡು ಮೋಹಿತನಾಗುತ್ತಾನೆ.ಶಂಕರಗಣನು ಅವರಿಬ್ಬರ ವಿವಾಹವನ್ನು ನೆರವೇರಿಸುತ್ತಾನೆ.ಅತ್ತ ಕನ್ಯಕುಬ್ಜದವರಿಗೂ, ಮಾನ್ಯಖೇಟದವರಿಗೂ ಕಾಳಗವಾಗಿ ಮಿಹಿರ ಭೋಜ ಸೋತು ಶರಣಾಗುತ್ತಾನೆ.

ಮಾನ್ಯಖೇಟದವರು ತಲವನದವರ ದಾಳಿಯನ್ನು ಇದಿರಿಸುತ್ತಾರೆ. ಗಂಗರಾಜ ನೀತಿಮಾರ್ಗನ ಮಗ ಭೂತುಂಗ, ನೃಪತುಂಗನ ದಳಪತಿ ಬಂಕೇಶನಲ್ಲಿ ಸೋಲುತ್ತಾನೆ. ಕೃಷ್ಣ, ಮಂಗಿ, ಶಂಕರಗಣಾದಿಗಳು ಕಿರಣಪುರಕ್ಕೆ ಬರುತ್ತಾರೆ. ನೊಳಂಬ ಮಂಗಿ ಕೃಷ್ಣನ ಕೊಲ್ಲುವ ಸಂಚನ್ನು ಮಾಡಿ ಪದ್ಮಲೆ ಎಂಬ ವೇಶ್ಯೆಯ ಮಗಳನ್ನು ಪ್ರೇಮಿಸುವಂತೆ ಮಾಡುತ್ತಾನೆ. ಕೃಷ್ಣನನ್ನು ವಿಷ ಪ್ರಯೋಗದಿಂದ ಕೊಲ್ಲಲು ಒಪ್ಪದೇ ಈ ವಿಚಾರವನ್ನು ಕೃಷ್ಣನಿಗೆ ತಿಳಿಸಲು ಆತ ಕೋಪಗೊಂಡು ಘರ್ಷಣೆಯಾಗಲು ಅಣ್ಣನ ಕಿರುಗತ್ತಿಗೆ ವಿಶಾಲಿನಿ ಬಲಿಯಾಗುತ್ತಾಳೆ.

ನೃಪತುಂಗನಿಗೆ ಈ ವಿಚಾರ ತಿಳಿದು ಕಿರಣಪುರಕ್ಕೆ ಮುತ್ತಿಗೆ ಹಾಕುತ್ತಾನೆ. ಶಂಕರಗಣ ಸೋಲುತ್ತಾನೆ. ಕೃಷ್ಣನನ್ನು ಸೆರೆಹಿಡಿದು ಮಾನ್ಯಖೇಟಕ್ಕೆ ಒಯ್ಯಲಾಗುತ್ತದೆ. ರಾಜ್ಯದ್ರೋಹವೆಸಗಿದ



ಮಗನಿಗೆ ಸರಿಯಾದ ಶಿಕ್ಷೆ ವಿಧಿಸಲು ರಾಜ ತೀರ್ಮಾನಿಸುತ್ತಾನೆ. ಆಗ ಕನಕಾಂಗಿ ಪತಿಭಿಕ್ಷೆ ಬೇಡಿ ಅವನ ಪ್ರಾಣ ಉಳಿಸುತ್ತಾಳೆ.ಕಾಲಕ್ರಮೇಣದಲ್ಲಿ ಮತ್ಸರಿ ಗಂಗರಾಜ ಮಾನ್ಯಖೇಟಕ್ಕೆ ಮತ್ತೆ ಮುತ್ತಿಗೆ ಹಾಕುತ್ತಾನೆ.

ನೃಪತುಂಗನ ಪುತ್ರಿ ಚಂದ್ರಲೆ ವನವಿಹಾರಕ್ಕೆ ಬಂದವಳು ಹುಲಿಯ ಬಾಯಿಗೆ ಆಹಾರವಾಗಲಿರುವಾಗ ಗಂಗರಾಜನ ಪುತ್ರ ಭೂತುಂಗ ರಕ್ಷಿಸುತ್ತಾನೆ.ಅವರಿಬ್ಬರಿಗೆ ಪ್ರೇಮ ಅಂಕುರಿಸಿ ತನ್ನ ಪ್ರಾಣ ರಕ್ಷಣೆ ಮಾಡಿದ ಭೂತುಂಗನನ್ನು ಯುದ್ಧದಲ್ಲಿ ಕೊಲ್ಲಬಾರದೆಂದು ತಂದೆಯಲ್ಲಿ ಕೇಳಿಕೊಳ್ಳುತ್ತಾಳೆ. ಭೀಕರ ಕದನ ಏರ್ಪಟ್ಟು ತಲವನದವರು ಸೋಲುತ್ತಾರೆ.ಭೂತುಂಗ ಸೆರೆಯಾಗುತ್ತಾನೆ. ನೀತಿಮಾರ್ಗ ಶರಣಾಗುತ್ತಾನೆ. ಸಂಧಾನ ನಡೆದು ಚಂದ್ರಲೆ ಭೂತುಂಗರ ವಿವಾಹ ಜರಗುತ್ತದೆ. ಮನೆತನಗಳ ಸಿಟ್ಟು ಮತ್ಸರ ದೂರವಾಗಿ ನೆಮ್ಮದಿ ಉಂಟಾಗುತ್ತದೆ.

ಈ ಕಥೆಯನ್ನು ಮಾಸ್ತರರು ಇತಿಹಾಸದ ಪುಟಗಳಿಂದಲೂ, ಮುಳಿಯ ತಿಮ್ಮಪ್ಪಯ್ಯನವರ 'ವೀರ ಬಂಕೆಯ' ಎಂಬ ಐತಿಹಾಸಿಕ ಕಾದಂಬರಿಯಿಂದ ಸಂಗ್ರಹಿಸಿರಬೇಕು ಎನಿಸುತ್ತದೆ.ಸಾಂಪ್ರದಾಯಿಕ ರೀತಿಯಲ್ಲಿ

ಗೋಪಾಲಕೃಷ್ಣ ದೇವರನ್ನು ಶಾರ್ದೂಲ ವಿಕ್ರೀಡಿತ ವೃತ್ತದಲ್ಲಿ ಸ್ತುತಿಸಿ ಮುಂದೆ ಮಧುಪುರದ ಗಣೇಶ ಹಾಗೂ ದೇವ ದೇವಿಯರ ಸ್ತುತಿಸುವ ಪದ್ಯಗಳಿವೆ.ಪ್ರಸಂಗದ ಕಥೆಯನ್ನು ಕಿರಿಗಹನದಾಚಾರ್ಯ ವಿಷ್ಣು ತನ್ನ ಶಿಷ್ಯರಿಗೆ ನಿರೂಪಿಸಿದಂತೆ ಹೇಳಲಾಗಿದೆ.

ಇತಿಹಾಸದ ಕಾಲಘಟ್ಟವನ್ನು ಬಿಂಬಿಸುವಂತೆ ಕಥೆಯ ಉದ್ದಕ್ಕೂ ಯುದ್ಧ ಸನ್ನಿವೇಶಗಳು ನಡೆಯುತ್ತಾ ಹೋಗುತ್ತವೆ. ನಡುವೆ ಕೃಷ್ಣ–ಕನಕಾಂಗಿ,ಕೃಷ್ಣ–ವಿಶಾಲಿನಿ,ಭೂತುಂಗ–ಚಂದ್ರಲೆ ಇವರ ಪ್ರಣಯ ಪ್ರಸಂಗಗಳು, ವಿಶಾಲಿನಿಯ ಪ್ರಾಣತ್ಯಾಗ, ಕೃಷ್ಣನ ಮನಃಪರಿವರ್ತನೆ ಮೊದಲಾದ ಪ್ರಸಂಗಗಳು ಕಥಾ ಘಟನೆಗಳಲ್ಲಿ ವೈವಿಧ್ಯವನ್ನು ಕಲ್ಪಿಸಿ ರಸವತ್ತಾಗಿಸಿದೆ. ನೃಪತುಂಗ, ಬಂಕೇಶ, ನೀತಿಮಾರ್ಗ, ಭೂತುಂಗ ಲೋಕಾದಿತ್ಯ, ವಿಶಾಲಿನಿ, ಚಂದ್ರಲೆ ಈ ಪಾತ್ರಗಳು ಕಥೆಯ ಓಘಕ್ಕೆ ಅನುಗುಣವಾಗುವಂತೆ ಬಂದು ಏಕತಾನತೆಯನ್ನು ತಪ್ಪಿಸಿವೆ.ರಾಗ ದ್ವೇಷ,ಮದ ಮತ್ಸರಾದಿ ಮಾನವ ಸ್ವಭಾವಗಳ ಎಳೆಗಳು ಚೆನ್ನಾಗಿ ವ್ಯಕ್ತವಾಗಿದೆ.

ನೃಪತುಂಗನು ಮಗನಾದ ಕೃಷ್ಣ ಯುದ್ಧಕ್ಕೆ ಹೊರಡುವುದನ್ನು ಬೇಡವೆಂದಾಗ, ಅಪಮಾನಿತನಾದ ಆತನ ಸಿಟ್ಟು ಭಾಮಿನಿಯಲ್ಲಿ ಈ ರೀತಿ ಪ್ರಕಟಗೊಂಡಿದೆ.

ಸಿಡಿಲಿನಬ್ಬರವೋ ಕುಲಾಚಲ।
ಬುಡ ಕುಸಿಯುತಂಬರಕೆ ನೆಗೆದುದೋ॥
ಕಡಲ ಮೊರೆತದ ಭರವೊ ಸಿಂಹದ
ಭೀಕರಾರ್ಭಟೆಯೋ
ಪೊಡವಿ ಬಾಯ್ಬಿಟ್ಟುದೋ ಮಹಾರವ।
ಗುಡುಗಿತೇನೇನೆನುತ ಸಭೆ ನಡ।
ನಡುಗಲಾಗಲಕಾಲ ವಷ್ಟು ಗರ್ಜಿಸುತಲೆಂದ॥

ಇದು ಮಾಸ್ತರರ ಐತಿಹಾಸಿಕ ಪ್ರಸಂಗಗಳಲ್ಲಿ ಉತ್ತಮ ಕೃತಿ. ಪ್ರಸಂಗ ಸೊಗಸಾಗಿಯೇ ಇದ್ದರೂ ಕೆಲವು ದೃಶ್ಯಗಳು ಪುನರಾವರ್ತನೆಯಂತೆ ಕಾಣುತ್ತದೆ. ಕಾಳಗಗಳು ಜಾಸ್ತಿಯಾಯಿತು ಎನ್ನಿಸುತ್ತದೆ. ಹಾಸ್ಯಕ್ಕೆ ಅವಕಾಶ ತೀರಾ ಕಡಿಮೆಯಾಯಿತು ಎನಿಸುತ್ತದೆ.

ಕೀರಿಕ್ಕಾಡು ಮಾಸ್ತರರು ಐತಿಹಾಸಿಕ ಪ್ರಸಂಗಗಳಲ್ಲದೇ ಕೆಲವು ಸಾಮಾಜಿಕ ಪ್ರಸಂಗಗಳನ್ನೂ ಬರೆದಿದ್ದಾರೆ. 'ಹೆಣ್ಣೊಬ್ಬಳ ಸಾಹಸಿ ಬದುಕನ್ನು ನಿರೂಪಿಸುವ ವೀರರಮಣಿ ಮತ್ತು ಮದ್ಯೋಚ್ಚಾಟನೆಯ

ಉದ್ದೇಶದಿಂದ ರಚಿತಗೊಂಡ ಮದ್ಯೋಚ್ಚಾಟನೆ ಎಂಬ ಪ್ರಸಂಗಗಳು ಮುಖ್ಯವಾದವು'[೧೦]. ಇವು ಬೇರೆ, ಬೇರೆ ಮೇಳಗಳಿಂದ ರಂಗಕ್ಕೆ ಬಂದು ಸೈ ಎನಿಸಿಕೊಂಡಿವೆ. ಆದರೆ ಈ ಪ್ರಸಂಗಗಳು ಪ್ರಕಟಗೊಂಡಿಲ್ಲ.

ಇಲ್ಲಿಯವರೆಗೆ ಕೀರಿಕ್ಕಾಡು ಮಾಸ್ತರರ ಯಕ್ಷಗಾನ ಪರಂಪರೆಯ ಬಗ್ಗೆ ಕೆಲವು ಅಭ್ಯಾಸಿ ಟಿಪ್ಪಣಿಯನ್ನಷ್ಟೇ ಇಲ್ಲಿ ನೀಡಲಾಗಿದೆ. ಸಾಕಷ್ಟು ಮಾಹಿತಿಗಳ, ಆಕರಗಳ ಕೊರತೆ ಇದೆ. ಇದು ನಮ್ಮ ಸಂಶೋಧಕರ ಒಲವು ಈ ಕಡೆಗೆ ವಾಲಿಲ್ಲ ಎಂಬುದಕ್ಕೆ ಉದಾಹರಣೆ. ನಿಜವಾಗಿ ವಿಸ್ತಾರವಾದ ಮಹಾಪ್ರಬಂಧವೊಂದಕ್ಕೆ ಅಗತ್ಯವಿರುವಷ್ಟು ಸಾಮಗ್ರಿಗಳು ಇವೆ.ಸಂಶೋಧಕರ,ವಿಮರ್ಶಕರ ದೃಷ್ಟಿ ಕೀರಿಕ್ಕಾಡು ಅವರ ಯಕ್ಷಗಾನ ಸೇವೆಯ ಕುರಿತ ಸಾಧನೆಯನ್ನು ಮೌಲ್ಯಮಾಪನಕ್ಕೆ ಒಳಪಡಿಸಬೇಕಾಗಿದೆ. ಈ ಪ್ರಬಂಧ ಒಂದು ಗಮನಸೆಳೆಯುವ ಪ್ರಯತ್ನದೊಂದಿಗೆ ಕೀರಿಕ್ಕಾಡು ವಿಷ್ಣು ಮಾಸ್ತರರ ಪ್ರಸಂಗ ಸಾಹಿತ್ಯದ ಸ್ಥೂಲ ಅಧ್ಯಯನವನ್ನಷ್ಟೇ ಮಾಡಿದೆ.

## ಸಂದರ್ಭಸೂಚಿ


೧. ಡಾ.ಅಮೃತ ಸೋಮೇಶ್ವರ : ಸಮನ್ವಯಶೀಲ ಸಮಷ್ಠಿಕಲೆ ಯಕ್ಷಗಾನ, ಯಕ್ಷಾಂದೋಳ ಪು.ಸಂ.೫೫

೨.ಡಾ.ಎಂ.ಪ್ರಭಾಕರ ಜೋಷಿ; ಯಕ್ಷಗಾನ ಪ್ರದರ್ಶನ :ಅರ್ಥವಿಸ್ತಾರ, ಅನನ್ಯ ಪು.ಸಂ.೩೫೩

೩.ಡಾ.ಎಂ.ಪ್ರಭಾಕರ ಜೋಷಿ; ಯಕ್ಷಗಾನ ಪ್ರದರ್ಶನ :ಅರ್ಥವಿಸ್ತಾರ, ಅನನ್ಯ ಪು.ಸಂ.೩೫೪

೪.ರಾಘವ ನಂಬಿಯಾರ್ ಕೆ.ಎಂ.: ಶ್ವೇತ ಕುಮಾರ ಚರಿತ್ರೆ ಯಕ್ಷರಸ ಚೇತನ ಪು.ಸಂ.೨೪

೫.ರಾಘವ ನಂಬಿಯಾರ್ ಕೆ.ಎಂ.: ಶ್ವೇತ ಕುಮಾರ ಚರಿತ್ರೆ ಯಕ್ಷರಸ ಚೇತನ ಪು.ಸಂ.೨೭

೬.ರಾಘವ ನಂಬಿಯಾರ್ ಕೆ.ಎಂ.: ಶ್ವೇತ ಕುಮಾರ ಚರಿತ್ರೆ ಯಕ್ಷರಸ ಚೇತನ ಪು.ಸಂ.೨೬

೭.ಡಾ.ಉಪ್ಪಂಗಳ ಶಂಕರನಾರಾಯಣ ಭಟ್ :ಕೀರಿಕ್ಕಾಡು ವಿಷ್ಣು ಮಾಸ್ತರರ ಯಕ್ಷಗಾನ ಪ್ರಸಂಗಗಳು, ವಜ್ರಪತ್ರ ಪು.ಸಂ.೨೦

೮.ಆನಂದರಾಮ ಉಪಾಧ್ಯ :ಯಕ್ಷಗಾನ ಮಹಾಭಾರತ ಪ್ರಸಂಗಗಳು ಪು.ಸಂ.೨೬

೯. ಡಾ.ಅಮೃತ ಸೋಮೇಶ್ವರ : ಒಂದು ವಿಶಿಷ್ಟ ಐತಿಹಾಸಿಕ ಪ್ರಸಂಗ, ಯಕ್ಷರಸ ಚೇತನ, ಪು.ಸಂ.೧೫

೧೦.ಡಾ.ಅಮೃತ ಸೋಮೇಶ್ವರ : ಒಂದು ವಿಶಿಷ್ಟ ಐತಿಹಾಸಿಕ ಪ್ರಸಂಗ, ಯಕ್ಷರಸ ಚೇತನ, ಪು.ಸಂ.೧೬

ಯಕ್ಷಗಾನ ಪ್ರದರ್ಶನಗಳು ಪಂಡಿತ ಪಾಮರರನ್ನು ಏಕಕಾಲದಲ್ಲಿ ಸಂತೋಷಪಡಿಸುವ ಕಲಾಪ್ರಕಾರ.ಆಟಗಳಾಗಲೀ, ಕೂಟಗಳಾಗಲೀ ಪ್ರಸಂಗಗಳೇ ಆಧಾರ.ಕಥನಾತ್ಮಕ ಪ್ರಸಂಗಗಳು ಕನ್ನಡ ಸಾಹಿತ್ಯದಲ್ಲಿ ಹಿಂದೆಯೇ ಇತ್ತು.ಕಥನಾತ್ಮಕವಾದ ಕಾವ್ಯದ ಸ್ವಭಾವ,ಲಕ್ಷಣಗಳೇ ಬೇರೆ. ಯಕ್ಷಗಾನ ಪ್ರಸಂಗಗಳು ಕಾವ್ಯ ಜಾತಿಗೇ ಸೇರಿದ್ದಾದರೂ ಇವು ಗೇಯ ನಾಟ್ಯ ಶ್ರುತಿಯಾದ ಕಾರಣ ಇವುಗಳ ಸ್ವರೂಪವೇ ಬೇರೆ.ಯಕ್ಷಗಾನ ಪ್ರಸಂಗ ಕರ್ತೃವಿಗೆ ಉಳಿದ ಕವಿಗಳಿಗಿರುವಷ್ಟು ಸ್ವಾತಂತ್ರ್ಯವಿಲ್ಲ.ಯಾಕೆಂದರೆ ಯಕ್ಷಗಾನ ಕಲಾ ಪ್ರಕಾರ ಭಿನ್ನರುಚಿಯ ಬಹುಮಂದಿ ಪ್ರೇಕ್ಷಕರ ಮುಂದೆ ಗೊತ್ತಾದ ಕಾಲದಲ್ಲಿ ಪ್ರದರ್ಶಿತವಾಗುವಂತಹುದು. ಹಾಗಾಗಿ ಇಂತಹ ಪ್ರೇಕ್ಷಕವರ್ಗವನ್ನು ಮುಟ್ಟುವ, ಅವರಿಗೆ ಸಂತೋಷವನ್ನುಂಟು ಮಾಡುವ ಬಗ್ಗೆ ಕವಿ ಸದಾ ಎಚ್ಚರಿಕೆಯಿಂದಿರಬೇಕಾಗುತ್ತದೆ.

ಕವಿ ಯಕ್ಷಗಾನ ಪ್ರಸಂಗ ರಚನೆಯ ಕಾಲದಲ್ಲಿ ಆತ ವಿಮರ್ಶಕ ಪ್ರೇಕ್ಷಕನಾಗಿಯೂ ಕ್ರಿಯಾಶೀಲನಾಗಿರಬೇಕು. ಇತರೆ ಕಾವ್ಯಗಳಲ್ಲಿ ಪಾತ್ರ,ಪದ್ಯ,ವರ್ಣನೆ ಹೆಚ್ಚಾದರೂ ಸಹಿಸಿಕೊಳ್ಳಬಹುದು. ಆದರೆ ದೃಶ್ಯಕಾವ್ಯದಲ್ಲಿ ಯಾವುದೇ ಅಂಶ ಪ್ರಮಾಣರಹಿತವಾದರೆ ಔಚಿತ್ಯಕ್ಕೆ ಭಂಗವುಂಟಾಗುತ್ತದೆ. ಆದ್ದರಿಂದ ಆಕರ್ಷಕ ವಸ್ತು,ವಿಭಿನ್ನ ಪಾತ್ರ ಸ್ವಭಾವ ದರ್ಶನ, ಉತ್ತಮ ಸಂವಿಧಾನ,ಮೌಲ್ಯ ಪ್ರತಿಪಾದನೆ ಮತ್ತು ಒಂದು,ಎರಡು ಮತ್ತು ಮೂರನೆಯ ಕಾಲದಲ್ಲಿ ಭಾಗವತರು ಹಾಡಲು ಅನುಕೂಲವಾದ ಸಾಹಿತ್ಯ,ರಾಗ, ಛಂದಸ್ಸು,ನಾಟ್ಯರಸ ಇತ್ಯಾದಿಗಳನ್ನು ರಸಿಕ ಪ್ರೇಕ್ಷಕರಿಗೆ ಮುಟ್ಟುವಂತೆ ಅಭಿವ್ಯಕ್ತಿಸಲು ಬೇಕಾದ ಅಂಶ ಪ್ರಸಂಗಗಳಲ್ಲಿರಬೇಕಾಗಿದೆ.ಆದ್ದರಿಂದ ಕವಿ ಬಳಸುವ ಭಾಷೆ, ಭಾವ ಸಂದರ್ಭಗಳಿಗೆ ಸೂಕ್ತವಾದ ಛಂದಸ್ಸಿನ ಆಯ್ಕೆ ನಿಜವಾಗಿಯೂ ಕವಿ ಪ್ರತಿಭೆಗೆ ಒಂದು ಸವಾಲು.ಕೀರಿಕ್ಕಾಡು ವಿಷ್ಣು ಮಾಸ್ತರರು ತಮ್ಮ ಪ್ರಸಂಗಗಳಲ್ಲಿ ಅತ್ಯಂತ ಸರಳ ವಾಕ್ಯಗಳಿಂದೊಡಗೂಡಿದ, ಪ್ರಾಸಾನ್ವಿತ ಪದ್ಯಗಳನ್ನು ನೀಡಿದ್ದಾರೆ.

ಉದಾಹರಣೆಗೆ ಸ್ವಯಂಪ್ರಭಾ ಪರಿಣಯದ ಒಂದು ಪದ್ಯವನ್ನು ಗಮನಿಸಿ

ನಳಿನ ನಯನೆ। ಛಲವಿದೇನೆ। ಚೆಲುವೆ ಮೋಹನ್ನೆ।

ಒಲವಿನಿಂದವರಿಸಿ ಚಂದ।ಗೊಳಿಸು ಸಂಪನ್ನೆ॥

ಚಂದ್ರವದನೆ।ಕುಂದರದನೆ।ಮಂದಗಾಮಿನೀ।

ಬಂದು ಬೇಡು।ವಂದನೋಡು।ನಿಂದು ಕಾಮಿನೀ॥

ಯಕ್ಷಗಾನದಲ್ಲಿ ಪ್ರಸಂಗಗಳು ವೇಷಧಾರಿಗೆ, ಕೂಟಗಳಲ್ಲಾದರೆ ಅರ್ಥಧಾರಿಗೆ ಕೇವಲ ನೀಲಿನಕಾಶೆ ಮಾತ್ರ. ಆದ್ದರಿಂದ ಅರ್ಥಹೇಳುವವನಿಗೆ ವಿಸ್ತರಿಸುವುದಕ್ಕೆ ಯೋಗ್ಯವಾದ ವಿಷಯಗಳು ಸಂಕ್ಷಿಪ್ತವಾಗಿ ಪ್ರಸಂಗಗಳಲ್ಲಿ ಕಾಣಿಸಿಕೊಳ್ಳಲೇಬೇಕು. ಇಂತಹ ಸಂದರ್ಭಗಳಲ್ಲಿ ಕವಿಗೆ ಸಹಾಯ ಮಾಡುವುದು

ಸಾಹಿತ್ಯದ ಓದು.ಉಪಮೆ ರೂಪಕಾದಿಗಳ ಬಳಕೆ. ಇಲ್ಲಿ ಇನ್ನೊಂದು ಸಮಸ್ಯೆಯಿದೆ. ಬಹುತೇಕ ಯಕ್ಷಗಾನ ಕಲಾವಿದರು ಹೆಚ್ಚು ಓದಿಕೊಂಡವರಲ್ಲ. ಆದ್ದರಿಂದ ಪದ್ಯ, ಅಲ್ಲಿನ ಸಾಹಿತ್ಯದ ಅಂಶ, ಅಲಂಕಾರಗಳ ಧ್ವನಿ ಅವರಿಗೆ ಅರ್ಥವಾಗುವಂತಿರಬೇಕು. ಆದ್ದರಿಂದ ಸರಳತೆ, ಸಾಕಷ್ಟು ನೇರವಾಗಿ ಪಾತ್ರದ ಭಾವನೆಗಳನ್ನು ಅಭಿವ್ಯಕ್ತಿಸುವುದು ಯಕ್ಷಗಾನ ಕವಿಗೆ ಅನಿವಾರ್ಯ.ಆದ್ದರಿಂದ ಭಾಷಾ ಸರಳತೆ ಮತ್ತು ವಾಚ್ಯಗುಣ ಕವಿಯ ಸಾಮರ್ಥ್ಯವೆಂದೇ ಪರಿಗಣಿಸಬೇಕಾಗುತ್ತದೆ.

ಯಕ್ಷಗಾನ ಪ್ರಸಂಗ ಕರ್ತೃಗಳು ಬಳಸಿರುವ ಛಂದೋ ಪ್ರಭೇದಗಳನ್ನು ಗಮನಿಸಿದರೆ ಆರಂಭದಲ್ಲಿ ಶಾರ್ದೂಲ ವಿಕ್ರೀಡಿತ ಅಥವಾ ಮತ್ತೇಭ ವಿಕ್ರೀಡಿತ ವೃತ್ತಗಳು ಸ್ತುತಿಪದ್ಯಕ್ಕೆ ಬಳಕೆಯಾಗಿದೆ. ಕೆಲವರು ವಾರ್ಧಕ ಷಟ್ಪದಿಯನ್ನು ಪ್ರಯೋಗಿಸಿದ್ದಾರೆ.ಮತ್ತೇಭವಿಕ್ರೀಡಿತವು ಪ್ರಸಂಗ ಮಧ್ಯದಲ್ಲೂ ಕಥಾ ವಿಸ್ತರಣೆಗೆ ಅನುಕೂಲವಾಗುವಂತೆ ಬಂದಿದೆ.ಮಾತ್ರಾ ಬಂಧಗಳಾದ ಭಾಮಿನಿ ಮತ್ತು ಕಂದ ಪದ್ಯಗಳೂ ಕಥೆಯ ವಿಸ್ತರಣೆಗಾಗಿಯೇ ಬಳಕೆಯಾಗಿದೆ. ಭಾಮಿನಿ ಷಟ್ಪದಿಯನ್ನು ದಕ್ಕಿಸಿಕೊಳ್ಳಬೇಕಾದರೆ ಕವಿಗೆ ಅಪಾರವಾದ ಸಾಮರ್ಥ್ಯವಿರಬೇಕಾಗುತ್ತದೆ. ಕಂದ ಮತ್ತೊಂದು ಕ್ಲಿಷ್ಟವಾದ ಬಂಧ ಎಂಬುದರಲ್ಲಿ ಎರಡು ಮಾತಿಲ್ಲ.ಅದರೊಂದಿಗೆ ಯಕ್ಷಗಾನ ಪ್ರಸಂಗಗಳಲ್ಲಿ ವಿಪುಲವಾಗಿ ಬಳಕೆಯಾದ ಬಂಧಗಳೆಂದರೆ ದ್ವಿಪದಿ ಮತ್ತು ಚೌಪದಿ. ಪಾತ್ರಗಳ ಸಂಭಾಷಣೆಗೆ ಇದು ಸೂಕ್ತಬಂಧವಾಗಿದೆ.

ಮಾಸ್ತರರ ಪ್ರಸಂಗಗಳಲ್ಲಿ ಸಾಹಿತ್ಯಿಕ ಅಂಶಗಳು ಹೇರಳವಾಗಿದೆ. ಮೂಲತಃ ಮಾಸ್ತರರು ಕವಿಯಾಗಿರುವುದು ಇದಕ್ಕೆ ಕಾರಣವಿರಬಹುದು. ಧ್ವನಿ ಕಾವ್ಯದ ಗುಣ. ಶೃಂಗಾರ ರಸಕ್ಕೆ ಮಾಸ್ತರರ ಪ್ರಸಂಗಗಳಲ್ಲಿ ವಿಶೇಷ ಪ್ರಾಮುಖ್ಯ ದೊರೆತಿದೆ. ಬ್ರಹ್ಮಯಜ್ಞ ಪ್ರಸಂಗದ 'ಚಂದ್ರವದನೆ। ಕುಂದರದನೆ। ಚಂದದರಗಿಣಿ॥ ಎಂಬ ಪದ್ಯ ಉಚಿತ ಪ್ರಾಸಾನ್ವಿತವಾಗಿ ಸಾಹಿತ್ಯಿಕ ಶೋಭೆಯನ್ನು ಹೊತ್ತಿದೆ.ಹರಿರತ್ನ ಹಾರದ 'ಕಂಭುಕಂಠಿನಿ ಮುಗುಳಂಬನಗಿಣಿಯು', ಸೀತಾಪರಿತ್ಯಾಗದ ಅಂಬುವದನೆ ಶೋಭಿಪನೇತ್ರೆ, ಅಂಬಿಕಾ ಮಹಾತ್ಮೆಯ ಕನ್ನಡಿಯಂತೆ ಶೋಭಿಪ ಕೆನ್ನೆ ಮೊದಲಾದ ಪದ್ಯಗಳು, ಶ್ವೇತ ಕುಮಾರ ಚರಿತ್ರೆಯ ಮೊಗ ಚಂದಿರನ ಬಿಂಬ ಹೊರತಲ್ಲಾ।ಚೆಲ್ವ। ನಗೆಯದು ಚಂದ್ರಿಕೆಯಹುದಲ್ಲಾ ಎಂಬ ಸಾಲುಗಳು ಸಾಹಿತ್ಯಾತ್ಮಕ ಗುಣವನ್ನು ಹೊಂದಿದೆ.

ಅಲಂಕಾರಗಳನ್ನು ಮಾಸ್ತರರು ಹೇಗೆ ಚೆನ್ನಾಗಿ ಬಳಸುತ್ತಿದ್ದರು ಎಂಬುದಕ್ಕೆ ಹಲವು ಉದಾಹರಣೆಗಳಿವೆ. ಮೇಲೆ ಉದಾಹರಿಸಿದ 'ಮೊಗ ಚಂದಿರನ ಬಿಂಬ ಹೊರತಲ್ಲಾ।ಚೆಲ್ವ। ನಗೆಯದು

ಚಂದ್ರಿಕೆಯಹುದಲ್ಲಾ' ಎಂಬ ಪದ್ಯದಲ್ಲಿ ಚಂದ್ರ-ಚಂದ್ರಿಕೆ ಸಂಬಂಧವನ್ನು ಮುಖ-ನಗುವಿನ ಸಂಭ್ರಮಕ್ಕೆ ಹೋಲಿಸುವುದರಲ್ಲಿರುವ ಸ್ವಾರಸ್ಯವನ್ನು ನೋಡಬಹುದು.

ಅಭಿಮನ್ಯು ಪ್ರಸಂಗದಲ್ಲಿ ಧರ್ಮರಾಯನು ಅಭಿಮನ್ಯುವನ್ನು ಕುರಿತು 'ಶಿಶುವು ನೀನೆಲೆ ಕಂದ' ಎಂದು ತಡೆದಾಗ ಅಭಿಮನ್ಯು "ಇಬ್ಬನಿ ತೊರೆಗಿಡುವರೆ ಹರಿಗೋಲನು" ಎಂದು ಕೇಳುತ್ತಾನೆ.ಅದಕ್ಕೆ ಧರ್ಮರಾಯ ಅಷ್ಟೇ ಕಾವ್ಯಾತ್ಮಕವಾಗಿ ಉತ್ತರಿಸುತ್ತಾನೆ.

ಇಳಿಯಬಹುದಂಬುಧಿಯ ಸುಳಿಯಂ
ತುಳಿಯಬಹುದು ಉರಿಗಿರಿಯನ್
ಗೆಲಲಸಾಧ್ಯವು ಪದ್ಮವ್ಯೂಹದಿ ಹಲಚಿ ಮಗನೇ

ಇಲ್ಲಿ ಬಂದಿರುವ "ಇಬ್ಬನಿತೊರೆ" ಎಂಬ ಕಲ್ಪನೆ ರೋಚಕವಾದುದು.ಇಬ್ಬನಿಯ ತೊರೆಗೆ ಹರಿಗೋಲು ಯಾಕೆ. ಈ ಸಣ್ಣ ಯುದ್ಧಕ್ಕೆ ಹೆದರುವುದು ಯಾಕೆ ಎಂಬರ್ಥದ ಈ ಸಾಲು ಮೋಹಕವಾಗಿದೆ. ಕವಿಯಾದವನಿಗೆ ಮಾತ್ರ ಈ ರೀತಿಯ ಅನನ್ಯ ರೂಪಕಗಳನ್ನು ಸೃಷ್ಟಿಸಲು ಸಾಧ್ಯ.

'ಪ್ರಸಂಗ ಕರ್ತೃಗಳ ಛಂದೋ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಿದಂತೆ ತೋರುವುದಿಲ್ಲ. ಈ ಉಲ್ಲಂಘನೆ ತಾಳರಾಗಗಳನ್ನು ಹೊಂದಿಸುವುದಕ್ಕಾಗಿಯೇ ಆಗಿರಬಹುದು'.[7] ಛಂದಸ್ಸು ಲಕ್ಷಣಗಳನರಿಯೆ ಎಂದು ಯಕ್ಷಗಾನ ಕವಿಗಳು ಹೇಳಿಕೊಂಡಿದ್ದರೂ ಅಲ್ಲಲ್ಲಿ ಎಡವಿದ್ದು ಸುಳ್ಳಲ್ಲ.ಯಕ್ಷಗಾನ ಪದ್ಯಗಳಲ್ಲಿ ಪ್ರಯೋಗವಾದ ಪದಗಳು ಸುಲಿದ ಬಾಳೆಯ ಹಣ್ಣಿನಂದದಿ ಲಲಿತವಾಗಿದ್ದು ಭಾಗವತನು ಹಾಡುವಾಗ ಸುಲಭವಾಗಿ ಅರ್ಥೈಸುವಂತೆ ಇರಬೇಕು. ಇದು ಪ್ರಸಂಗಗಳಲ್ಲಿ ಇರಬೇಕಾದ ಗುಣ. ಇದಕ್ಕಾಗಿ ಛಂದಸ್ಸಿನಲ್ಲಿ ಮಾಡಿಕೊಳ್ಳುವ ವ್ಯತ್ಯಾಸಗಳು ಅಪೇಕ್ಷಣೀಯ.

### ಕೀರಿಕ್ಕಾಡು ಮಾಸ್ತರರ ಯಕ್ಷಗಾನ ಪ್ರಸಂಗಗಳಲ್ಲಿ ಭಾಷೆ

ಯಕ್ಷಗಾನ ಪ್ರಸಂಗ ಅಸಾಹಿತ್ಯವಲ್ಲ. ಅಲ್ಲಿ ಹೊಸಗನ್ನಡದ ಪ್ರಯೋಗಗಳು ಅಷ್ಟು ಸರಿಹೊಂದುವುದಿಲ್ಲ. ಹೊಸಗನ್ನಡ ಬಳಕೆ ಯಕ್ಷಗಾನ ಲೋಕಕ್ಕೆ ಶ್ರೋತೃಗಳನ್ನು ಕರೆತರಲು ಸಫಲವಾಗುವುದಿಲ್ಲ. ನಡುಗನ್ನಡದ ಶೈಲಿ ಯಕ್ಷಗಾನಕ್ಕೆ ಹೆಚ್ಚು ಒಪ್ಪುತ್ತದೆ. ಮಾಸ್ತರರ ಯಕ್ಷಗಾನ ಕೃತಿಗಳು ನಡುಗನ್ನಡದ ಭಾಷಾಶೈಲಿಯಲ್ಲಿದ್ದು ಸಂವಹನ ದೋಷಗಳಿಂದ ಮುಕ್ತವಾಗಿವೆ. ಅವರ ಪ್ರಸಂಗಗಳಲ್ಲಿ ಭಾಷಾ ಪ್ರೌಢಿಮೆಯನ್ನೂ, ಪದ ಲಾಲಿತ್ಯವನ್ನೂ ನಾವು ಕಾಣಬಹುದಾಗಿದೆ.

ಮಾಸ್ತರರು ಆಗಾಗ ಬಳಸುವ 'ಸುಧೆ ಈಂಟಿದ ತನು", 'ಪರಿಕಿಪೆ', 'ಹೋರು', 'ಕೆಂಡ ಕಾರುತಲೆಂದ', 'ಚಂಡಸಾಹಸವ', 'ಭಳಿರೆ ಫಡ ನೀನಾರು', 'ಬಿಡುಗಣ್ಣನೇ', 'ಬೊಪ್ಪ' ಇತ್ಯಾದಿ ಶಬ್ದಗಳು ಯಕ್ಷಗಾನ ಪ್ರಸಂಗ ಸಾಹಿತ್ಯದಲ್ಲೇ ಧ್ವನಿಪೂರ್ಣವಾದುದು.ಅವರ ಮೃಗಾವತೀ ಪರಿಣಯದ ಒಂದು ಪದ್ಯ ಹೀಗಿದೆ.

ಪಡ ಫಡ ದನುಜಾಧಮನೆ। ನಿ ।
ಲ್ಲಡಿಯಿಡದಿರು ಮುಂದಾನೆ।ಬಡಿದಿಕ್ಕುವೆನೈನಾಕಾ।
ಬಂ।ದಡರಿದುದ್ಯಾಕೆಲೊ ಪೋಕಾ ॥೧॥

ಇನ್ನೊಂದು ಪದ್ಯ ಹೀಗಿದೆ

ಹಂದೆಯೆನಲು ನೀನಾರು । ನಾ ।
ಹಂದೆನು ನೀನೇ ಸಾರೂ।
ಹಿಂದಕೆ ಸ್ವರ್ಗವ ಕೊಟ್ಟು । ಬರೆ।
ಮುಂದಕೆ ಕೊಡುವೆನು ಪೆಟ್ಟು ॥೨॥

ಈ ರೀತಿಯಲ್ಲಿ ಸರಳ ಆದರೆ ಭಾವಪ್ರಕಟಕ್ಕೆ ಅನುಗುಣವಾಗುವಂತೆ ರಚನೆಗೊಂಡ ಪದ್ಯಗಳು ಮಾಸ್ತರರ ಪ್ರಸಂಗಗಳ ಹೆಚ್ಚುಗಾರಿಕೆ.

ಮಾಸ್ತರರ ಕನ್ನಡ ಪ್ರೇಮ ಅನುಪಮವಾದುದು. ಅವರ ಯಾವ ಕೃತಿಯಲ್ಲೂ ಅನ್ಯ ಭಾಷಾ ಪ್ರಭಾವ ಕಾಣಿಸುವುದಿಲ್ಲ.ಅಚ್ಚಗನ್ನಡ ಶಬ್ದಗಳೇ ಅವರ ಪ್ರಸಂಗಗಳಲ್ಲಿ ಹೆಚ್ಚು. ಅಲ್ಲಲ್ಲಿ ಸಂಸ್ಕೃತ ಶಬ್ದಗಳು ಸಾಕಷ್ಟು ಪ್ರಮಾಣದಲ್ಲಿ ಸೇರಿಕೊಂಡು 'ಕರಿಮಣಿಸರದಲ್ಲಿ ಕೆಂಪು ಹವಳವನ್ನು ಕೋದಂತೆ' ಕಾವ್ಯ ಸೌಂದರ್ಯವನ್ನು ಹೆಚ್ಚಿಸಿದೆ.ಮುದ್ದಣನ ಕುಮಾರ ವಿಜಯ,ರತ್ನಾವತೀ ಕಲ್ಯಾಣಗಳೆಂಬ ಪಂಡಿತವರ್ಗದಿಂದ ಮೆಚ್ಚುಗೆ ಪಡೆದ ಪ್ರಸಂಗಗಳಲ್ಲಿ ವಿಷ್ಣುಭಟ್ಟರು ಅರ್ಥಧಾರಿಯಾಗಿ ಹೊಸಹೊಸ ಒಳನೋಟಗಳನ್ನು ನೀಡುತ್ತಿದ್ದರಂತೆ. ಅವರ ಅರ್ಥಗಾರಿಕೆಯಲ್ಲಿ ಪ್ರಾಸಬದ್ಧತೆ ಮತ್ತು ಶ್ಲೇಷಾರ್ಥದ ಶಬ್ದಗಳೇ ಹೆಚ್ಚಾಗಿದ್ದು ಸಾಮಾನ್ಯರಿಗೆ ಅರ್ಥವಾಗುವುದೂ ಕಷ್ಟವಿತ್ತು ಎಂಬ ಅಭಿಪ್ರಾಯವೂ ಇತ್ತು.[೨] ಆದರೆ ಅವರು ಬರೆದ ಪ್ರಸಂಗಗಳು ಈ ಯಾವ ಪ್ರಭಾವಕ್ಕೂ ಒಳಗಾಗದೇ ಸ್ವತಂತ್ರವಾಗಿ ಸರಳವಾಗಿ ಮೂಡಿಬಂದಿದೆ. ದೇಸೀಯ ಸೊಗಡಿನಿಂದ ಕೂಡಿದೆ.

ಸುಲೋಚನಾ ಸ್ವಯಂವರವೆಂಬ ಪ್ರಸಂಗದಲ್ಲಿನ ಒಂದು ಪದ್ಯ ಈ ದೇಸೀಯತೆಯನ್ನು ಬಹಳ ಸುಂದರವಾಗಿ ತೆರೆದಿಡುತ್ತದೆ.ದ್ರುತ ನಡೆಯ ಭಾವಕ್ಕೆ ಅನುಗುಣವಾದ ಶಂಕರಾಭರಣ ರಾಗದಲ್ಲಿ ಮಟ್ಟೆತಾಳದಲ್ಲಿ ಈ ಪದ್ಯವಿದೆ.

ಎಲವೊ ಖಚರ ಗರ್ವದಿಂದ । ಗಳಕಬೇಡ ನಮ್ಮ ಶರದ
ಬಲುಹನರಿಯದೇನು ಪಿತ್ಥ । ತಲೆಗೆ ಹತ್ತಿತೇ ॥೧॥
ತಪ್ಪು ಮಾತನಾಡಿ ನಿನ್ನ । ದರ್ಪ ಕಾಣಿಸುವೆಯ ಮರುಳೆ।
ಕಪ್ಪುಗೊರಳ ಮುಖ್ಯರೆನ್ನ । ಬಲ್ಪಿಗಂಜ್ವರು ॥೨॥
ಅಂಬರದಲಿ ಸುಳವೆನೆಂಬ। ಸಂಭ್ರಮದ ವಿಹಾರ ಬೇಡ।
ಸಾಂಬಶಿವಗೆ ಸರಿಯೇ ನೀನು। ಜಂಬವ್ಯಾತಕೆ॥೩॥

ಇಲ್ಲಿ ಬರುವ ಪಿತ್ಥ ತಲೆಗೆ ಹತ್ತಿತೇ, ಕಪ್ಪುಗೊರಳ ಮೊದಲಾದ ಪದಗಳು ದೇಸೀಯತೆಯ ಸ್ಪರ್ಶವನ್ನು ಪದ್ಯಕ್ಕೆ ನೀಡುತ್ತದೆ. ವಿಷ್ಣುಮಾಸ್ತರರ ಪದ ಪ್ರಯೋಗದಲ್ಲಿ ಸುಕುಮಾರತೆಯಿದೆ. ಶ್ವೇತಕುಮಾರ ಚರಿತ್ರೆಯಲ್ಲಿ ತ್ರಿಲೋಕ ಸುಂದರಿಯನ್ನು ಕಂಡು ಶ್ವೇತಕುಮಾರನು ಉದ್ಗರಿಸುವ ಪದ್ಯ ಸುಕುಮಾರ ಗುಣಕ್ಕೆ ಒಳ್ಳೆಯ ಉದಾಹರಣೆ. ಸುಕುಮಾರತೆಗೆ ಯೋಗ್ಯವಾದ ಯಮುನಾ ಕಲ್ಯಾಣಿ ಅಷ್ಟತಾಳದಲ್ಲಿದೆ.

ಇವಳ್ಯಾರಿದರರೆ ಮಂಜುಳಗಾತ್ರೆ।ತ್ರೈ।
ಷ್ಟಭುವನ ಮೋಹಿನಿ ಸಾರಸ ನೇತ್ರೆ॥ಪ॥
ಮೊಗ ಚಂದಿರನ ಬಿಂಬ ಹೊರತಲ್ಲ। ಚೆಲ್ವ।
ನಗೆಯದು ಚಂದ್ರಿಕೆ ಹೊರತಲ್ಲ॥
ಸೊಗಸಿನ ಮುಂಗುರುಳ್ಮರಿದುಂಬಿ। ಬಪ್ಪ।
ಬಗೆ ನೋಡೆ ನಲಿವಳ್ ಯೌವನದುಂಬಿ॥

ಇನ್ನೊಂದು ಪದ್ಯ ಮುದ್ದಣನ ಕುಮಾರ ವಿಜಯದ 'ಕನ್ನೆ ಸುಗುಣ ಸಂಪನ್ನೆ' ಎಂಬ ಪದ್ಯದಂತಿರುವ ಒಂದು ಪದ್ಯ ಸುಕುಮಾರತೆಯ ಗುಣಕ್ಕೆ ಉದಾಹರಣೆಯಾಗಿದೆ.ಮುದ್ದಣ ಹೊಸದಾಗಿ ರಚಿಸಿದ ಕೆಲವು ಪದ್ಯಗಳು ಕೀರಿಕ್ಕಾಡು ಅವರಿಗೆ ಬಲುಪ್ರಿಯವಾಗಿತ್ತೆಂದು ತೋರುತ್ತದೆ.ಮುದ್ದಣನ ಕೃತಿಗಳನ್ನು ಬಲಿಪ ಭಾಗವತರು ಚೆನ್ನಾಗಿ ಹಾಡುತ್ತಿದ್ದರು ಇದನ್ನು ಕೇಳಿ ಮಾಸ್ತರರಲ್ಲಿ ಮುದ್ದಣನ ಪದ್ಯಗಳ ಆಸಕ್ತಿ ಬೆಳೆದಿರಬೇಕು'[೩] ಆ ಪ್ರಭಾವ ಈ ಪದ್ಯದಲ್ಲಿ ಢಾಳಾಗಿದೆ.

ನಾರೀ ಬಲು ವೈಯಾರಿ ನೀನಾರಿದಾರಿಯೋಳೇನ್ ಸ್ವಾರಿ॥
ಸಾರ ಮನೋಹರಿ ಸಾರಸಾಕ್ಷಿ ಸರಿ ಯಾರಿಗಿಲ್ಲವು ನಿನಗೀರಸೆಯಲಿ ಸರಿ॥
ನಿನ್ನಯ ಪಿತನೆಲ್ಲಿ ನ್ಯಾರವ ನೆನ್ನು ಸುಗುಣ ಮಣಿಯೆ ಸಂಶಯ॥

ವೆಣ್ಣಿ ಬೇಡನವ ಕನ್ನೆ ಮನ್ನೆತನ ಪುಣ್ಯಾಕಿಲ್ಲವೆಣೆಯಿ॥
ನಿರ್ಣಯ ತಿಳಿದಿಲ್ಲವೆಲ್ಲ ನುಡಿ ನನ್ನಿಯ ರಮಣಿಯ ಕಾಂತಿಯ॥
ರನ್ನದ ಕನ್ನಡಿ ಕೆನ್ನೆಯ ಶುಭ ಸಂಪನ್ನೆಯೆ ಕಾಮಿನಿ ರನ್ನೆಯ ಮೋಹಿನಿ॥

ತಾಳಮದ್ದಳೆಗಳಲ್ಲಿ ಬಲಿಪರ ಹಾಡುಗಳನ್ನು ಕೇಳಿ ಯಕ್ಷಗಾನ ಹಾಡುಗಳಲ್ಲಿನ ಗಮಕ ನೃತ್ಯ ವಿಲಾಸವನ್ನು ಕೀರಿಕ್ಕಾಡು ತಮ್ಮ ರಚನೆಗಳಲ್ಲೂ ತರುವ ಪ್ರಯತ್ನ ಮಾಡಿದ್ದಾರೆ. ಅದರಲ್ಲಿ ಮಹತ್ವದ ಯಶಸ್ಸು ಹೊಂದಿದ್ದಾರೆ.ಛಂದಸ್ಸಿನೊಳಗೂ ಶಬ್ದಗಳ ನಾಟ್ಯ ಅವರ ರಚನೆಯ ವಿಶೇಷ. ಪ್ರಸಂಗವೊಂದರಲ್ಲಿ ಅವರು ಶಬ್ದಗಳ ಕುಣಿತವನ್ನು ಸಾಧಿಸಿದ ಬಗೆ ಹೀಗಿದೆ.

ಮತ್ತ ಗಜಂಗಳ ಮೊತ್ತವ ಸವರುತ ಕತ್ತರಿಸುತ
ತಲೆಯೆತ್ತುವ ಹರಿಗಳ ಬೇಟೆಯಾಡುತ್ತಾ ಬಂದನಾಗ॥
ಅದೋ ದುರ್ಮದ ಹುಲಿ ಯೊದಗಿತಧಿಕ ಬಲಿ
ತುದು ಸದೆಯಿರಿತದೊಳಿನ್ನುತಲಿ॥

ಮೇಲೆ ಕಾಣಿಸಿದ ಮೊದಲ ಬಂಧದಲ್ಲಿ ವಿರಾಮದ ಗೆರೆಗೆ ಸರಿಯಾದ ಚತುರಶ್ರ ನಡೆಯಲ್ಲಿ ಪದ್ಯ ಹೇಳಬಹುದು. ಆದರೆ ಈ ರೀತಿ ಶ್ವೇತಕುಮಾರ ಚರಿತ್ರೆಯ ಮುಂದಿನ ಪದ್ಯವನ್ನು ಹಾಡುವಂತಿಲ್ಲ.ಅಲ್ಲಿ ಗೆರೆಗೆ ಮೊದಲೇ ಗತಿಯನ್ನು ನಿಲ್ಲಿಸಿ ಚತುರಶ್ರಕ್ಕೆ ಹೊಂದಿಸಿ ಹೋಗಬೇಕಾಗುತ್ತದೆ.

## ಕೀರಿಕ್ಕಾಡು ಪ್ರಸಂಗಗಳಲ್ಲಿ ಛಂದೋ ಪ್ರಯೋಗಗಳು

ಯಕ್ಷಗಾನ ಕಲೆಯ ಹೆಸರೇ ಸೂಚಿಸುವಂತೆ ಇದರ ಸಾಹಿತ್ಯದಲ್ಲಿ ಗಾನವೇ ಪ್ರಧಾನ. ಗಾನವೆಂದರೆ ಪದ್ಯ,ಹಾಡುವಿಕೆಗೂ ಗಾನವೆಂದೇ ಹೆಸರು ಹಾಗಾಗಿ ಪ್ರಸಂಗ ಸಾಹಿತ್ಯದಲ್ಲಿ ಹಾಡುಗಾರಿಕೆ ಅತ್ಯಂತ ಪ್ರಧಾನವಾದವುಗಳು. ಪದ್ಯವಿಲ್ಲದೇ ಹಾಡುಗಾರಿಕೆಯಿಲ್ಲ.ಛಂದಸ್ಸಿನ ಮಾತೃಕೆ ಇಲ್ಲದೇ ಪದ್ಯವಿಲ್ಲ.ಪ್ರಸಂಗ ಸಾಹಿತ್ಯದಲ್ಲಿರುವ ಅಪೂರ್ವವಾದ ಅನೇಕ ಪದ್ಯಜಾತಿಗಳನ್ನು ಹಾಡುವ ರೀತಿ, ರಚನೆಯ ಖಚಿತತೆ, ವಿಮರ್ಶೆಯ ಕಸುವು, ಆಸ್ವಾದದ ಆಹ್ಲಾದ ಇವುಗಳನ್ನು ತಿಳಿದುಕೊಂಡಾಗ ಪದ್ಯದ ಒಳಮರ್ಮವನ್ನು ತಿಳಿಯಲು ಸಾಧ್ಯ.

ಬ್ರಹ್ಮ ವಿಷ್ಣು ಮತ್ತು ರುದ್ರ ಷಟ್ಪದಗಳು ಯಕ್ಷಗಾನ ಸಾಹಿತ್ಯದಲ್ಲಿವೆ. ಇವುಗಳಲ್ಲಿ ಬ್ರಹ್ಮ ಮತ್ತು ರುದ್ರ ಷಟ್ಪದಗಳ ಉಲ್ಲೇಖ ಛಂದಶ್ಶಾಸ್ತ್ರದಲ್ಲಿಲ್ಲ. ಆದರೆ ಯಕ್ಷಗಾನ ಸಾಹಿತ್ಯ ಪ್ರಕಾರದಲ್ಲಿ ಇವೆರಡು ವಿಧದ

ಅಂಶ ಷಟ್ಪದಗಳಿವೆ ಬೇರೆಲ್ಲೂ ಇರದ ಈ ಷಟ್ಪದಗಳು ಕನ್ನಡಕ್ಕೆ ಯಕ್ಷ ಸಾಹಿತ್ಯದ ಕೊಡುಗೆ.ಮಾಸ್ತರರ ಪ್ರಸಂಗಗಳಲ್ಲೂ ಈ ರೀತಿಯ ಅಂಶಗಣಾನ್ವಿತ ಪದ್ಯಗಳನ್ನು ನೋಡಬಹುದಾಗಿದೆ. ಮೃಗಾವತಿ ಪರಿಣಯದಲ್ಲಿ 'ಬಿಡಲು ದಿವ್ಯಾಶುಗವ ನೊಂದನು' ಎಂದು ಆರಂಭವಾಗುವ ಪದ್ಯ, 'ಅನಿತರಲಿ ವಸುನೇಮಿಯೆಂಬವ' ಮೊದಲಾದ ಹಲವು ಪದ್ಯಗಳನ್ನಿಲ್ಲಿ ಉದಾಹರಿಸಬಹುದು.

ಕೀರಿಕ್ಕಾಡು ವಿಷ್ಣುಭಟ್ಟರು ಎಂಬತ್ತಕ್ಕೂ ಅಧಿಕ ಪ್ರಸಂಗಗಳನ್ನು ಬರೆದರೂ ಎಲ್ಲಿಯೂ ಪ್ರಾಸಕ್ಕಾಗಿ,ಶಬ್ದಕ್ಕಾಗಿ,ಭಾವಕ್ಕಾಗಿ ಕಷ್ಟ ಪಟ್ಟದ್ದು ಕಾಣುವುದಿಲ್ಲ. ಕುಮಾರವ್ಯಾಸನು ಹೇಳಿದಂತೆ ಪದವಿಟ್ಟಳುಪದೊಂದಗ್ಗಳಿಕೆ ವಿಷ್ಣು ಭಟ್ಟರಿಗೂ ಸಲ್ಲುವುದೆಂದು ಅವರ ಓರಗೆಯ ಜನನ್ನ ಹೇಳುತ್ತಿದ್ದರು.[೪] 'ಪ್ರಸಂಗ ಬರೆಯುವುದು ಅವರಿಗೆ ನೀರು ಕುಡಿದಷ್ಟು ಸುಲಭ'[೫] ಪ್ರಾಸ ಮಯವಾದ ದೀರ್ಘ ಪದ್ಯಗಳ ರಚನೆಯಲ್ಲಿ ವಿಷ್ಣು ಮಾಸ್ತರರ ಮೇಲೆ ಮುದ್ದಣ ಪ್ರಭಾವಿಸಿದಂತೆ ತೋರುತ್ತದೆ.[೬]

ಬಿಡಿಬಿಡಿ ಚಿಂತೆಯ । ಕೊಡಿಕೊಡಿರಪ್ಪಣೆ।
ಜಡವ್ಯೂಹವನು।
ಕೆಡಹುವೆ ಬೊಪ್ಪನೆ ಮೃಡನಡ್ಡೈಸಲು
ಧೃಢಗೆಡೆ ಕಾದುವೆನು।

(ವೀರ ಅಭಿಮನ್ಯು)

ಮಕ್ಕಳೇ ಮಾಣಿಕ್ಯ ಮಣಿಗಳೇ
ತಕ್ಕುದಲ್ಲೇ ಯೋಚನೆ...... (ಜರಾಸಂಧ ಪರಾಭವ)

ಈ ರೀತಿಯ ಸಾಲುಗಳನ್ನು ಕೀರಿಕ್ಕಾಡು ಮಾಸ್ತರರ ಕೃತಿಯಿಂದ ಬೇಕಾದಷ್ಟು ನೀಡಬಹುದಾಗಿದೆ. ಕೆಲವು ಕಡೆ ಪ್ರಾಸದ ಬಳಕೆಯ ಕಡೆಗಿನ ಒಲವು ಅತಿಯೆಂದು ಅನ್ನಿಸುವುದೂ ಇದೆ.

ಉದಾ: ಅಭಿಮನ್ಯು ಪ್ರಸಂಗದಲ್ಲಿ ಯುದ್ಧಕ್ಕೆ ಹೊರಟ ಅಭಿಮನ್ಯುವನ್ನು ತಾಯಿ ತಡೆಯುವ ಭಾಗ

ನಿಲ್ಲಿಸು ನಿಲ್ಲಿಸು ಮಾತಾ। ಕಂದ।
ನಿಲ್ಲಿಸು ನಿಲ್ಲಿಸು ಮಾತಾ॥
ನಿಲ್ಲಿಸು ನಿಲ್ಲಿಸು।
ಸೊಲ್ಲಿಸದಿರುಣ।
ಸಲ್ಲದು ನಿನಗಾರಿಲ್ಲವೆ ಹೇಳೆನಲು॥

ಇಲ್ಲಿ 'ನಿಲ್ಲಿಸು' ಎಂಬ ಪದ ಮತ್ತೆ ಮತ್ತೆ ಬಂದು ಪದ್ಯಕ್ಕೆ ಭಾರವಾಗುವಂತಿದೆ.

ಅಮೋಘವರ್ಷ ನೃಪತುಂಗ ಎಂಬ ಪ್ರಸಂಗದಲ್ಲಿ ಅಧಿಕ ಪ್ರಾಸದ ಮೋಹ ಕವಿಯನ್ನು ಹೇಗೆ ಬಾಧಿಸಿದೆ ನೋಡಿ

ಪಿತ್ತ ತಲೆಗೆ ಹತ್ತಿ ಮಲಗೆ।
ಮತ್ತನಾಗೆ ಬಂದೀ ಕಡೆಗೆ॥
ಕತ್ತಿಯೆತ್ತೆ ಕಾಂಬೆ ಮತ್ತೆ।
ಸತ್ತೇ ಬೀಳುವೆ॥

ಒಡೆಯರಿಗೀ ದೇಹ।
ಮುಡಿಪಲ್ಲವೇ ದಾಹ॥
ವಡಗಿಸಿದರೆ ದ್ರೋಹ।
ಕೆಡೆಯಿಲ್ಲವಿಡಿ ಸ್ನೇಹ॥

ಚಿತ್ತಕ್ಕೆ ನೆಮ್ಮದಿ।
ಯುತ್ಸಾಹ ಹಮ್ಮಿದಿ॥
ಮಿತ್ರ ಕೃಷ್ಣನ ಶತ್ರು ತನುಮನ।
ವತ್ತ ಗೊಡದೆನ।ಗಿತ್ತ ನುಡಿದಿ ಘನ॥

ಯಕ್ಷಗಾನದ ಮಟ್ಟಿಗೆ ವಿಶ್ವಕೋಶದಂತಿದ್ದ ಕೀರಿಕ್ಕಾಡು ವಿಷ್ಣು ಮಾಸ್ತರರು ಯಕ್ಷಗಾನ ಪ್ರಸಂಗ ಸಾಹಿತ್ಯಕ್ಕೆ ಅನನ್ಯ ಕೊಡುಗೆ ನೀಡಿದ್ದಾರೆ. ಪ್ರಸಂಗ ಸಾಹಿತ್ಯಕ್ಕೆ ಕಾವ್ಯಲೋಕದಲ್ಲಿ ಗೌರವದ ಸ್ಥಾನಮಾನ ಸಿಗಬೇಕೆಂಬುದು ಅವರ ಆಶಯವಾಗಿತ್ತು.ಅದಕ್ಕೆ ಪುಷ್ಟಿ ಕೊಡುವಂತೆ ಅವರ ಪ್ರಸಂಗಗಳು ಕಾವ್ಯದ ಸೊಗಸು ಮತ್ತು ಸ್ವರೂಪವನ್ನು ಹೊಂದಿತ್ತು ಎಂಬುದನ್ನು ಅವರ ಪ್ರಸಂಗಗಳ ಅಧ್ಯಯನದಿಂದ ತಿಳಿದುಕೊಳ್ಳಬಹುದಾಗಿದೆ. ಧ್ವನಿಪೂರ್ಣವಾದ ಸಾಲುಗಳು,ಅಲ್ಲಲ್ಲಿ ಮಿಂಚುವ ಅಲಂಕಾರಗಳು, ಹಾರದಂತಿರುವ ಪ್ರಾಸ, ಮುದನೀಡುವ ಸರಳ ಭಾಷೆಯಿಂದ ಮಾಸ್ತರರ ಯಕ್ಷಗಾನ ಪ್ರಸಂಗಗಳು ಸಾಹಿತ್ಯ ಪಠ್ಯವಾಗಿಯೂ ಅಭ್ಯಾಸಯೋಗ್ಯವಾಗಿದೆ.

# ಸಂದರ್ಭಸೂಚಿ


೧.ಡಾ.ಉಪ್ಪಂಗಳ ಶಂಕರನಾರಾಯಣ ಭಟ್ಟ; ಗಡಿನಾಡ ದೀಪ ಪು.ಸಂ.೩,೨೬

೨.ಗೋಪಾಲಕೃಷ್ಣ ಶಾಸ್ತ್ರಿ, ಮೂಡಂಬೈಲು : ಅಗ್ರಮಾನ್ಯ ಯಕ್ಷಗಾನ ಕವಿ,
ಯಕ್ಷರಸ ಚೇತನ ಪು.ಸಂ.೪೫

೩.ರಾಘವ ನಂಬಿಯಾರ : ಶ್ವೇತಕುಮಾರ ಚರಿತ್ರೆ , ಯಕ್ಷರಸ ಚೇತನ ಪು.ಸಂ.೨೭

೪.ಗೋಪಾಲಕೃಷ್ಣ ಶಾಸ್ತ್ರಿ, ಮೂಡಂಬೈಲು : ಅಗ್ರಮಾನ್ಯ ಯಕ್ಷಗಾನ ಕವಿ,
ಯಕ್ಷರಸ ಚೇತನ ಪು.ಸಂ.೪೫

೫.ಅಮೃತ ಸೋಮೇಶ್ವರ : ಯಕ್ಷಾಂದೋಳ ಪು.ಸಂ.೪೮

೬. ಅಮೃತ ಸೋಮೇಶ್ವರ : ಅಮೋಘ ವರ್ಷ ನೃಪತುಂಗ : ಯಕ್ಷ ರಸ ಚೇತನ ಪು.ಸಂ ೧೮

# ಅಧ್ಯಾಯ ಆರು

ಯಕ್ಷಗಾನ ಕವಿ ಕೀರಿಕ್ಕಾಡು ವಿಷ್ಣು ಮಾಸ್ತರರ ಕುರಿತಾದ ಈ ಕಿರು ಅಧ್ಯಯನದಲ್ಲಿ ನೇರ ಹಾಗೂ ಪರೋಕ್ಷವಾಗಿ ಕಂಡುಕೊಂಡ ವಿಚಾರಗಳ ಮುಖ್ಯಾಂಶಗಳನ್ನು ಈ ರೀತಿಯಾಗಿ ಸಂಗ್ರಹಿಸಬಹುದು.

- ಯಕ್ಷಗಾನ ಕಲೆ ಹಳ್ಳಿ ಪ್ರದೇಶದ, ಗ್ರಾಮೀಣ ಪ್ರದೇಶದ ಆಸಕ್ತ ಕಲಾವಿದರಿಂದ ಬೆಳೆದಿದೆ.ಉಳಿದಿದೆ.ಕೀರಿಕ್ಕಾಡು ವಿಷ್ಣು ಮಾಸ್ತರರಂತಹ ಸಮರ್ಪಣಾಭಾವದ ಬಹುಮುಖ ಆಸಕ್ತಿಯ ಮತ್ತು ಪ್ರತಿಭೆಯ ಕಲಾವಿದರು ಯಕ್ಷಗಾನದ ನಿಜವಾದ ಆಸ್ತಿ. ಅಂಥವರು ಸಂಘಟನಾತ್ಮಕವಾಗಿ ಮಾಡಿದ ಕಾರ್ಯಗಳು ಯಕ್ಷಗಾನ ಕಲೆಗೆ ಅನೇಕ ಕಲಾವಿದರನ್ನು ಕೊಡುಗೆಯಾಗಿ ನೀಡಿದೆ. ಕರಾವಳಿ ಪ್ರದೇಶದಲ್ಲಿರುವ ಕೀರಿಕ್ಕಾಡು ಮಾಸ್ತರರಂತಹ ವ್ಯಕ್ತಿ ವಿಶೇಷಗಳನ್ನು, ಶಕ್ತಿಕೇಂದ್ರಗಳನ್ನು ಸಮಗ್ರ ಅಧ್ಯಯನಕ್ಕೆ ಒಳಪಡಿಸುವ ಅಗತ್ಯ ಇದೆ. ತನ್ಮೂಲಕ ಸಮರ್ಪಕ ರೀತಿಯಲ್ಲಿ ಸಮಗ್ರ ಯಕ್ಷಗಾನದ ಚರಿತ್ರೆಯನ್ನು ತಿಳಿದುಕೊಳ್ಳಲು ಪುನರ್ ರೂಪಿಸಲು ಸಾಧ್ಯ.

- ಕೀರಿಕ್ಕಾಡು ವಿಷ್ಣು ಮಾಸ್ತರರ ಕವಿತೆಗಳಲ್ಲಿ ಪ್ರಗತಿಪರ, ಜನಪರ ಧೋರಣೆಯಿದೆ.ಅವರ ಮೇಲಾದ ಗಾಂಧಿವಾದದ ಪ್ರಭಾವ ಕವಿತೆಗಳಲ್ಲಿ ದಟ್ಟವಾಗಿದೆ. ಆಧುನಿಕ ಕವಿತೆಗಳ ಪರಮ ಮೌಲ್ಯಗಳೆಂದು ಪರಿಗಣಿತವಾದ ಜಾತ್ಯತೀತ ನಿಲುವು ಮತ್ತು ಸಮಾನತೆಯ ಆಶಯ ಅವರ ಕವಿತೆಗಳಲ್ಲಿದೆ. ವಿಷ್ಣು ಶರಣನ ದರ್ಪಣ ಎಂಬ ಕೃತಿಯಲ್ಲಿ ನೈತಿಕ ಮತ್ತು ಸಾಮಾಜಿಕ ಪ್ರಜ್ಞೆ ಜಾಗೃತವಾಗಿದೆ.

- ಮಾಸ್ತರರ ಕಾದಂಬರಿಗಳು ಗ್ರಾಮೀಣ ಸಂಸ್ಕೃತಿಯಿಂದ ಬದಲಾಗುತ್ತಿರುವ ಸನ್ನಿವೇಶದಲ್ಲಿ ನಗರ ಸಂಸ್ಕೃತಿಗೆ ಮಾರು ಹೋಗುತ್ತಿರುವುದರ ಸೂಚಕಗಳಾಗಿವೆ.ಜಾಗತೀಕರಣದ ಹಿನ್ನೆಲೆಯಿಂದ ಈ ಸಂಸ್ಕೃತಿ ಸಂಘರ್ಷವನ್ನು ಗಮನಿಸಿದರೆ ಹೊಸ ಅರ್ಥವ್ಯಾಪ್ತಿಗಳು ಸಿಗುತ್ತವೆ. ಮಾಸ್ತರರ ಪತ್ತೇದಾರಿ ಕಾದಂಬರಿಗಳು ವಿಶಿಷ್ಟ ಶೈಲಿಯನ್ನು ಹೊಂದಿದ್ದು ಭಾಷಾಬಳಕೆಯ ದೃಷ್ಟಿಯಿಂದ ಕುತೂಹಲಕಾರಿಯಾಗಿದೆ.

- ಹೆಸರಿಗೆ ಅನ್ವರ್ಥವಾಗುವಂತೆ ಮಾಸ್ತರರಾಗಿ ಅನೇಕ ಶಿಷ್ಯರಿಗೆ ಯಕ್ಷಗಾನದ ತರಬೇತು ನೀಡಿದ ಗುರು. ತಮ್ಮ ಮನೆಯನ್ನೇ ಯಕ್ಷಗಾನ ತರಬೇತು ಕೇಂದ್ರವಾಗಿ ಮಾಡಿಕೊಂಡು ಉಚಿತವಾಗಿ, ಆರ್ಥಿಕವಾಗಿ ಅಶಕ್ತರಿಗೆ ತಮ್ಮ ದುಡಿಮೆಯ ಭಾಗವನ್ನೂ ನೀಡಿ ಶಿಷ್ಯರನ್ನು

ಪ್ರೋತ್ಸಾಹಿಸುತ್ತಿದ್ದವರು. ಯಕ್ಷಗಾನ ಭೀಷ್ಮ ಎಂದೇ ಖ್ಯಾತರಾದ ಶೇಣಿ ಗೋಪಾಲಕೃಷ್ಣ ಭಟ್ಟರಂತಹ ಅನೇಕ ಪ್ರಸಿದ್ಧ ಕಲಾವಿದರು ಇವರ ಗರಡಿಯಲ್ಲಿ ಪಳಗಿದವರು.

- ಮಾಸ್ತರರು ಶ್ರೇಷ್ಟ ತಾಳಮದ್ದಲೆ ಅರ್ಥಧಾರಿಗಳಾಗಿದ್ದರು. ಪಾತ್ರ ಚಿತ್ರಣ, ರಸಾವಿಷ್ಕಾರ ವಾದ, ಖಂಡನೆ–ಮಂಡನೆ, ಮಾತಿನ ಓಘ ಮುಂತಾದುವಕ್ಕೆ ಮಾಸ್ತರರು ಪ್ರಸಿದ್ಧರು. ಪ್ರಸಂಗ ಪದ್ಯದಲ್ಲಿರುವ ಹಲವಾರು ಪದ್ಯಗಳನ್ನು ಚಿತ್ರ ವಿಚಿತ್ರವಾಗಿ ವಿಂಗಡಿಸಿ ಬಗೆಬಗೆಯ ಶ್ಲೇಷಾರ್ಥದ ಮೂಲಕ ಹೊಸ ಅರ್ಥದ ಮಿಂಚನ್ನು ಒದಗಿಸ ಬಲ್ಲವರಾಗಿದ್ದರು. ಪೌರಾಣಿಕ ಘಟನೆಗಳನ್ನು, ವ್ಯಕ್ತಿಗಳನ್ನು ಸಮಕಾಲೀನಗೊಳಿಸುವ ಜಾಣ್ಮೆ, ಸಾಮರ್ಥ್ಯ ಮಾಸ್ತರರಿಗೆ ಅದ್ಭುತ ಎನಿಸುವಷ್ಟಿತ್ತು. ಒಂದು ತಾಳಮದ್ದಲೆಯಲ್ಲಿ ಶೂರ್ಪನಖೆಯ ಅರ್ಥ ಹೇಳುತ್ತಾ ''ರಾಮ, ನನ್ನ ಕಿವಿ ಮೂಗುಗಳನ್ನು ಕತ್ತರಿಸಿ ಮಾನಭಂಗ ಮಾಡಿದೆಯಲ್ಲ! ನಾನೇನು ಸಾಮಾನ್ಯಳೆಂದು ಭಾವಿಸಿದೆಯಾ? ದಕ್ಷಿಣದಲ್ಲಿ ನನ್ನ 'ಅಣ್ಣಾದೊರೆ' ರಾವಣನಿದ್ದಾನೆ. 'ಕಾಮರಾಜ'ನೆನಿಸಿ, 'ಕರುಣಾನಿಧಿ'ಯೂ ಆಗಿದ್ದಾನೆ. ಎಚ್ಚರಿಕೆ'' ಎಂದು ಹೇಳಿದ್ದರು. ಈ ಮಾದರಿಯ ಅರ್ಥಗಾರಿಕೆಯಿಂದ ಒದಗಿದ ಪುರಾಣ ಜ್ಞಾನ ಮತ್ತು ರಂಗಾನುಭವ ಮಾಸ್ತರರಿಗೆ ಯಕ್ಷಗಾನ ಪ್ರಸಂಗ ರಚನೆಗೆ ಸಹಕರಿಸಿತು. ಮಾತ್ರವಲ್ಲ ರಂಗಸ್ಥಳದಲ್ಲಿ ಅವುಗಳ ಯಶಸ್ಸಿಗೆ ಕಾರಣವೂ ಆಯಿತು.

- ಮಾಸ್ತರರ ಆತ್ಮಚರಿತ್ರೆ 'ಯಕ್ಷರಸಜೀವನ' ಅವರ ಕಾಲದ ಯಕ್ಷಗಾನದ ಸ್ಥಿತಿ ಗತಿಗಳ,ತಾಳಮದ್ದಳೆ ಕೂಟಗಳ ಅಧ್ಯಯನಕ್ಕೆ ಆಕರ ಕೃತಿಯಾಗಬಲ್ಲುದು. ಸರಳ,ಹೃದ್ಯ ಆತ್ಮಕಥನವಿದು. ನಿರೂಪಣೆಯಲ್ಲಿ ಕಾವ್ಯಾತ್ಮಕ ಶೈಲಿಯಿದೆ. ಇಡೀ ಕೃತಿ ಮೂರು ದಶಕಗಳ ಯಕ್ಷಗಾನದ ಏರಿಳಿತಗಳನ್ನು ಪ್ರಾಸಂಗಿಕವಾಗಿ ಒಳಗೊಂಡಿರುವುದರಿಂದ ಯಕ್ಷಗಾನದ ಕುರಿತು ಅಧ್ಯಯನ ನಡೆಸುವವರಿಗೆ ಪೂರಕ ಮಾಹಿತಿ ಆಕರವಾಗಿ ನಿಲ್ಲುವ ಕೃತಿಯಿದು.

- ಕೀರಿಕ್ಕಾಡರ ಯಕ್ಷಗಾನ ಪ್ರಸಂಗಗಳು ಸಮಗ್ರ ರಂಗ ಕಲ್ಪನೆಯಿಂದ ಕೂಡಿವೆ. ಅವರ ಪ್ರಸಂಗಗಳಲ್ಲಿ ಪೌರಾಣಿಕ ಪ್ರಸಂಗಗಳೇ ಹೆಚ್ಚು. ಮಾಸ್ತರರ ಪ್ರಕಟಿತ, ಅರ್ಥಸಹಿತ ಮತ್ತು ಅಪ್ರಕಟಿತ ಪ್ರಸಂಗಗಳಲ್ಲಿ ಒಟ್ಟು ತೊಂಬತ್ತಮೂರು ಪೌರಾಣಿಕ ಪ್ರಸಂಗಗಳಿವೆ.ಶ್ವೇತ ಕುಮಾರ ಚರಿತ್ರೆ, ಮೃಗಾವತೀ ಪರಿಣಯ, ಸೀತಾಪರಿತ್ಯಾಗ, ವೀರ ಅಭಿಮನ್ಯು,ಭೀಮ ಶಂಕರ ಮಹಿಮೆ ಪ್ರಸಿದ್ದ ಕೃತಿಗಳು. ಮಾಸ್ತರರ ಮಹತ್ವದ ಕೆಲವು ಐತಿಹಾಸಿಕ ಪ್ರಸಂಗಗಳೂ ಇವೆ. ಅದರಲ್ಲಿ ಅಮೋಘ ವರ್ಷ ನೃಪತುಂಗ, ಮಿತ್ರ

ಗುಪ್ತ ವಿಜಯ ಮುಖ್ಯವಾದವು. ಇದಲ್ಲದೇ ವೀರ ರಮಣಿ, ಮದ್ಯೋಚ್ಚಾಟನೆ ಎಂಬ ಸಮಾಜಮುಖಿಯಾದ,ಜನರಲ್ಲಿ ಜಾಗೃತಿ ಹುಟ್ಟಿಸುವ ಪ್ರಸಂಗಗಳು ಇವೆ.

- ಭಕ್ತಿ,ಶೃಂಗಾರ ಮಾಸ್ತರರ ಪ್ರಸಂಗಗಳ ಪ್ರಧಾನ ಭಾವಗಳು. ಗಾಂಧಿವಾದ ಮತ್ತು ಭಕ್ತಿ ಚಳುವಳಿಯಿಂದ ಮಾಸ್ತರರು ಪ್ರಭಾವಿತರಾಗಿದ್ದರು. ಅದರ ಪರಿಣಾಮ ಪ್ರಸಂಗ ರಚನೆಯ ಮೇಲಾಗಿದೆ. ಜನಮಾನಸವನ್ನು ಶೃಂಗಾರ ಭಾವ ಹಿಡಿದಿಡುವಷ್ಟು ಬೇರೆ ಯಾವ ರಸವೂ ಹಿಡಿದಿಡಲಾರದು ಎಂಬುದು ಲೋಕಸತ್ಯ. ರಾತ್ರಿ ಬೆಳಗಿನವರೆಗಿನ ನಡೆಯುವ ಯಕ್ಷಗಾನ ಬಯಲಾಟಗಳಲ್ಲಿ ಶೃಂಗಾರ ಮತ್ತು ವೀರವೇ ಪ್ರಧಾನವಾಗಿರಬೇಕೆಂಬುದು ಮಾಸ್ತರರ ಆಶಯ.

- ಮಾಸ್ತರರ ಪ್ರಸಂಗಗಳ ಮೇಲೆ ಮುದ್ದಣ ಕವಿಯ ಯಕ್ಷಗಾನ ಪ್ರಸಂಗಗಳ ಪ್ರಭಾವವನ್ನು ಗುರುತಿಸಬಹುದಾಗಿದೆ. ಭಾಷಾ ಬಳಕೆ, ಭಾವಕ್ಕನುಗುಣವಾದ ರಾಗಗಳ ಆಯ್ಕೆ, ಛಂದಸ್ಸು ಇತ್ಯಾದಿ ವಿಚಾರದಲ್ಲಿ ಮುದ್ದಣನ ಪ್ರಸಂಗಗಳ ಪ್ರಭಾವ ಆಗಿರುವುದನ್ನು ಗಮನಿಸಬಹುದಾಗಿದೆ.ಮುದ್ದಣನ 'ಕುಮಾರ ವಿಜಯ' ಪ್ರಸಂಗವು 'ಶ್ವೇತಕುಮಾರ ಚರಿತ್ರೆ'ಯ ಮೇಲೆ ಗಾಢವಾದ ಪ್ರಭಾವವನ್ನು ಬೀರಿದೆ.ಮುದ್ದಣ ಪ್ರಸಂಗಗಳು ಮತ್ತು ಕೀರಿಕ್ಕಾಡು ವಿಷ್ಣು ಮಾಸ್ತರರ ಯಕ್ಷಗಾನ ಪ್ರಸಂಗಗಳ ತೌಲನಿಕ ಅಧ್ಯಯನಕ್ಕೆ ಸಾಕಷ್ಟು ಅವಕಾಶಗಳಿವೆ.

- ಕೀರಿಕ್ಕಾಡು ಮಾಸ್ತರರ ಪ್ರಸಂಗ ಯಕ್ಷಗಾನದ ಸಮಗ್ರ ರಂಗಶಿಲ್ಪದ ಸಮತೋಲನದಿಂದ ಕೂಡಿದ್ದು ತಾಳಮದ್ದಲೆ ಕೂಟಕ್ಕಿಂತ ಬಯಲಾಟಗಳಿಗೇ ಹೆಚ್ಚು ಸೂಕ್ತವಾಗಿದೆ.ಪಾತ್ರದ ಆಗಮನ ನಿರ್ಗಮನಗಳಿಗೆ ಹೊಂದಿಕೆಯಾಗುವಂತೆ ಪದ್ಯಗಳನ್ನು ಮಾಸ್ತರರು ಸಂಯೋಜಿಸಿದ್ದಾರೆ. ಅವರ ಪ್ರಸಂಗಗಳಲ್ಲಿ ರಸಭಾವಗಳಿಗೆ ಹೆಚ್ಚು ಒತ್ತು.ತರ್ಕ ವಿತರ್ಕಗಳಿಗಲ್ಲ.ತಾಳಮದ್ದಲೆಯಲ್ಲಿ ವಾದ ತರ್ಕಗಳಿಗೆ ವೈಚಾರಿಕ ವಾಕ್ಝರಿಗೆ ಪ್ರಮುಖ ಸ್ಥಾನ.ಮಾಸ್ತರರು ತಮ್ಮ ಪದ್ಯಗಳಲ್ಲಿ ಘಟನಾ ಸರಣಿಗಳನ್ನು ಮುನ್ನಡೆಸುವ ಕ್ರಮ ರಂಗಸ್ಥಳದ ಪ್ರದರ್ಶನಕ್ಕೆ ಅನುಕೂಲವಾಗುವಂತಿದೆ.

- ಆಶುವೈಭವವಾಗಿರುವ ಯಕ್ಷಗಾನಕ್ಕೆ ಅರ್ಥವಿವರಣೆ ಸಹಿತವಾಗಿರುವ ಪ್ರಸಂಗಗಳನ್ನು ನೀಡಿ ಯುವಕರನ್ನು ಸೆಳೆದಿದ್ದಾರೆ.ಅರ್ಥವಿವರಣೆಯೂ ಕಾವ್ಯಾತ್ಮಕವಾಗಿದ್ದು ಎಲ್ಲರ ಓದಿಗೂ ದಕ್ಕುವಂತಿದೆ.

- ಯಕ್ಷಗಾನದ ಅರ್ಥಸಾಹಿತ್ಯವೂ ಸಾಹಿತ್ಯ ಪ್ರಕಾರವೆಂದು ದಾಖಲಾಗಬೇಕು ಎಂಬುದು ಮಾಸ್ತರರ ಆಶಯವಾಗಿತ್ತು.ಯಕ್ಷಗಾನದಲ್ಲಿ ತಾಳಮದ್ದಲೆಗಳ ಅರ್ಥಗಾರಿಕೆಯಲ್ಲಿ ಅದ್ಭುತ ಸಾಹಿತ್ಯವಿದೆ.ಉಪಮೆ ರೂಪಕಗಳು ಸಾಲು ಸಾಲಾಗಿ ಬರುತ್ತವೆ.ಆದರೆ ಅವು ಮುಂದಿನ ತಲೆಮಾರಿಗೆ ಉಳಿಯದೇ

ಹೋಗುತ್ತವೆ. ಅದು ದಾಖಲಾಗಬೇಕು ಎಂಬುದು ಮಾಸ್ತರರ ಆಭಿಮತವಾಗಿತ್ತು.ಯಕ್ಷರಸಚೇತನವೆಂಬ ಅಭಿನಂದನಾ ಗ್ರಂಥದಲ್ಲಿನ ವಿವಿಧ ಲೇಖನಗಳು ಕೀರಿಕ್ಕಾಡು ಮಾಸ್ತರರ ಅರ್ಥಗಾರಿಕೆಯ ಸೊಗಡನ್ನು ತೆರೆದಿಡುತ್ತದೆ.ಇದನ್ನು ಗಮನಿಸುವಾಗ ಯಕ್ಷಗಾನ ಅರ್ಥಗಾರಿಕೆಯನ್ನು ದಾಖಲಿಸುವ ಪ್ರಯತ್ನ ನಡೆಯಬೇಕು ಎನಿಸುತ್ತದೆ.

- ಶ್ವೇತಕುಮಾರ ಚರಿತ್ರೆ ಮತ್ತು ಅಮೋಘವರ್ಷ ನೃಪತುಂಗ ಮಾಸ್ತರರ ಪ್ರಾತಿನಿಧಿಕ ಎನ್ನಬಹುದಾದ ಪ್ರಸಿದ್ಧ ಯಕ್ಷಗಾನ ಪ್ರಸಂಗಗಳು.
- ಮಾಸ್ತರರ ಪ್ರಸಂಗಗಳಲ್ಲಿ ಸಾಹಿತ್ಯ ಮೌಲ್ಯ, ಭಾಷಿಕ ಸೊಗಸು, ಛಂದೋವೈವಿಧ್ಯವಿದೆ. ಪ್ರಾಸ ಪ್ರೀತಿ ಹೆಚ್ಚು.
- ಮಾಸ್ತರರ ಕನ್ನಡ ಪ್ರೀತಿ ವಿಶೇಷವಾದುದು.
- ಪ್ರಸಂಗಗಳಲ್ಲಿ ಕನ್ನಡ ದೇಸೀಯ ಪದಗಳ ಬಳಕೆ ಹೇರಳವಾಗಿದೆ.

'ಹಿಡಿದರೆ ಹಿಡಿ ತುಂಬ ಬಿಟ್ಟರೆ ಜಗ ತುಂಬ' ಎಂಬ ನುಡಿಮುತ್ತಿನಂತೆ ಕೀರಿಕ್ಕಾಡು ವಿಷ್ಣು ಮಾಸ್ತರರ ವ್ಯಕ್ತಿಮ. ಯಕ್ಷಗಾನ ತಾಳಮದ್ದಲೆಯಲ್ಲಿ ಅರ್ಥಧಾರಿಯಾಗಿ ಅವರು ಮಾಡಿದ ಸಾಧನೆ ಪ್ರತ್ಯೇಕ ಅಧ್ಯಯನಕ್ಕೆ ವಿಷಯವಾಗಬಲ್ಲುದು.ಯಕ್ಷಗಾನವೆಂಬ ಸಂಸ್ಕೃತಿ ಶಿಕ್ಷಣವನ್ನು ನೀಡುವ, ನೋಡುಗನಲ್ಲಿ ನೈತಿಕ ಪ್ರಜ್ಞೆಯನ್ನು ಜಾಗೃತಗೊಳಿಸುವ ಕಲಾಪ್ರಕಾರದ ಜತೆಗೆ ತನ್ನ ಬದುಕನ್ನು ಸಮರ್ಪಿಸಿಕೊಂಡ ಮಾಸ್ತರರು ಉಳಿದವರಿಗೆ ಮಾರ್ಗದರ್ಶಿಯಾಗಿದ್ದಾರೆ.

ನೂರಾರು ಶಿಷ್ಯರಿಗೆ ಯಕ್ಷಗಾನ ತರಬೇತಿ ಮತ್ತು ತಮ್ಮ ಅಮೂಲ್ಯ ಪ್ರಸಂಗ ಸಾಹಿತ್ಯದ ಮೂಲಕ ಸಂಸ್ಕೃತಿ ಪ್ರಸರಣದ ಕಾರ್ಯವನ್ನು ಮಾಸ್ತರರು ಮಾಡಿದ್ದಾರೆ. ಮುಂದಿನ ತಲೆಮಾರಿಗೆ ಯಕ್ಷಗಾನಾಸಕ್ತಿಯನ್ನು ರೂಪಿಸಿದ್ದಾರೆ. ಅವರ ಮಕ್ಕಳು ಡಾ.ರಮಾನಂದ ಬನಾರಿ,ವಿಶ್ವ ವಿನೋದ ಬನಾರಿ,ವನಮಾಲ ಕೇಶವ ಭಟ್ ಬನಾರಿ ಮೊದಲಾದವರು ಯಕ್ಷಗಾನ ಕಲೆಗೆ ಮಹತ್ವದ ಸೇವೆ ಸಲ್ಲಿಸುತ್ತಿದ್ದಾರೆ. ಮಾಸ್ತರರು ಸ್ಥಾಪಿಸಿದ ಬನಾರಿ ಶ್ರೀ ಗೋಪಾಲಕೃಷ್ಣ ಯಕ್ಷಗಾನ ಕಲಾಸಂಘ

ವಜ್ರಮಹೋತ್ಸವವನ್ನು ಆಚರಿಸಿದೆ. ಈಗಲೂ ಬನಾರಿಯಂತಹ ಗ್ರಾಮೀಣ ಪ್ರದೇಶದಲ್ಲಿ ಯಕ್ಷಗಾನದ ಕುರಿತು ಮಹತ್ವದ ಚಟುವಟಿಕೆಗಳನ್ನು ನಡೆಸುತ್ತಿದೆ.

ಮಾಸ್ತರರ ಕಲಾನೈಪುಣ್ಯತೆಗೆ ಸಾಕ್ಷಿಯಾಗಿ ನಮ್ಮೆದುರಿಗಿರುವುದು ಅವರ ಯಕ್ಷಗಾನ ಕೃತಿಗಳು. ಅವುಗಳಲ್ಲಿ ಪ್ರಕಟವಾಗದೇ ಉಳಿದಿರುವವುಗಳೇ ಹೆಚ್ಚು. ಕಾಲದ ಗರ್ಭದಲ್ಲಿ ಅವುಗಳು ಕರಗಿ ಹೋಗುವ ಮೊದಲು ಅವುಗಳನ್ನು ಮುದ್ರಿಸಿ ಉಳಿಸಿಕೊಳ್ಳಬೇಕಿದೆ. ಅವರ ಪ್ರಸಂಗ ಸಾಹಿತ್ಯದ ಸಮಗ್ರ ಸಂಪುಟ ಪ್ರಕಟಗೊಂಡಲ್ಲಿ ಅವು ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಅಪೂರ್ವ ಕೊಡುಗೆಯಾದೀತು. ಮಾತ್ರವಲ್ಲ ಪ್ರಸಂಗ ಸಾಹಿತ್ಯಕ್ಕೆ ಉಳಿದ ಕಾವ್ಯ ಪ್ರಕಾರದ ಗೌರವ ಪ್ರಾಪ್ತವಾಗುವುದಕ್ಕೆ ಬಲವಾದ ಸಾಕ್ಷ್ಯವಾಗಬಲ್ಲುದು. ಮಾಸ್ತರರ ಪ್ರಸಂಗಗಳು ಕಾವ್ಯಾತ್ಮಕವಾಗಿದ್ದು ಕಾವ್ಯಕ್ಕೆ ಹೆಗಲೆಣೆಯಾಗಿ ನಿಲ್ಲಬಲ್ಲ ಶಕ್ತಿ ಹೊಂದಿದೆ.

************

# ಪರಾಮರ್ಶನ ಗ್ರಂಥಗಳು

೧. ಅರ್ಥಗಾರಿಕೆಯ ಸ್ವರೂಪ ಸಮೀಕ್ಷೆ,ಪ್ರಭಾಕರ ಜೋಷಿ.ಎಂ. (ಸಂ),ಮೊ.ಶ.ಶಾ.ಸ್ಮ. ಸಮಿತಿ. ಮಂಗಳೂರು.-೧೯೮೧

೨. ಅನನ್ಯ,ಡಾ.ಚಿನ್ನಪ್ಪ ಗವಡ.ಕೆ.(ಸಂ), ಪ್ರೊ.ಶ್ರೀ.ಕೃಷ್ಣ ಭಟ್ ಅರ್ತಿಕಜೆ ಅಭಿನಂಧನಾ ಸಮಿತಿ, ಚೆನ್ನೈ-೨೦೦೮

೩. ಕರ್ಣಾವಸಾನ, ಕೀರಿಕ್ಕಾಡು ಮಾಸ್ತರ್ ವಿಷ್ಣು ಭಟ್ಟ, ಬನಾರಿ ಶ್ರೀ ಗೋಪಾಲಕೃಷ್ಣ ಪ್ರಕಾಶನ, ದೇಲಂಪಾಡಿ, ತೃತೀಯ ಮುದ್ರಣ ೨೦೦೬

೪. ಕೀರಿಕ್ಕಾಡು ಮಾಸ್ತರ್ ವಿಷ್ಣು ಭಟ್ಟಸಂಸ್ಮರಣ ಯಕ್ಷಗಾನ ಪ್ರಸಂಗ ಮಾಲಿಕೆ, ಸಂ ಪುಟ ೧೦-೧೬, ಡಾ.ರಮಾನಂದ ಬನಾರಿ .ಕೆ. ಮಂಜೇಶ್ವರ ಮತ್ತು ಎಚ್. ಬಿ.ಎಲ್.ರಾವ್ ಮುಂಬಯಿ, (ಸಂ) ಪದವೀಧರ ಯಕ್ಷಗಾನ ಸಮಿತಿ ಮುಂಬಯಿ, -೧೯೯೮

೫. ಕೃಷ್ಣ ಸಂಧಾನ-ಪ್ರಸಂಗ ಮತ್ತು ಪ್ರಯೋಗ, ಡಾ.ಪ್ರಭಾಕರ ಜೋಷಿ.ಎಂ., ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ ಉಡುಪಿ,೧೯೯೯

೬. ಗಡಿನಾಡ ದೀಪ, ಡಾ.ಶ್ರೀಕೃಷ್ಣ ಭಟ್.ಪಿ. (ಸಂ), ಕರ್ನಾಟಕ ಸಮಿತಿ (ರಿ.) ಕಾಸರಗೋಡು, ೨೦೦೭

೭. ಯಕ್ಷಗಾನ, ಶಿವರಾಮ ಕಾರಂತ ಕೆ.ಕನ್ನಡ ಅಧ್ಯನ ಸಂಸ್ಥೆ, ಮೈಸೂರು, ೧೯೭೪

೮. ಯಕ್ಷಗಾನ ಛಂದಸ್ಸು,ಶಿವರಾಮ ಕೆದಿಲಾಯ,ಶಿಶಿಲ ಪ್ರಕಾಶನ ದ.ಕ. ೧೯೬೪

೯. ಯಕ್ಷಗಾನ ಛಂದೋಂಬುಧಿ, ಡಾ.ನಾರಾಯಣ ಶೆಟ್ಟಿ.ಎನ್, ಯಕ್ಷಕಲಾ ಪಧ್ಮಾಪನಾ ಪ್ರಕಾಶನ,೨೦೦೫

೧೦. ಯಕ್ಷಗಾನ ತಾಳ ಮದ್ದಲೆ, ಸಾಮಗ, ಬಾ.ಮಲ್ಪೆ, ತುಳುನಾಡು ಪ್ರಗತಿ ಪ್ರಕಾಶನಾಲಯ ಮಲ್ಪೆ,೧೯೮೦

೧೧. ಯಕ್ಷಗಾನದಲ್ಲಿ ತಾಳಗಳು, ಹೊಸ್ತೋಟ ಮಂಜುನಾಥ ಭಾಗವತರು,(ಸಂ),ತಾಳವಾದ್ಯ ಕಲಾಕೇಂದ್ರ, ಬೆಂಗಳೂರು-೧೯೮೯

೧೨. ಯಕ್ಷಾಂದೋಳ,ಅಮೃತ ಸೋಮೇಶ್ವರ,ಅಮೃತ ಸೋಮೇಶ್ವರ ಅಭಿನಂದನಾ ಸಮಿತಿ, ಕಲಾಗಂಗೋತ್ರಿ,ಉಚ್ಚಿಲ.-೧೯೯೫

೧೩.ಯಕ್ಷಗಾನ ಬಯಲಾಟ,ಶಿವರಾಮ ಕಾರಂತ .ಕೆ. ಕನ್ನಡ ಅಧ್ಯಯನ ಸಂಸ್ಥೆ ಮೈಸೂರು,೧೯೭೪

೧೪. ಯಕ್ಷಭೀಮನ ನೂರು ಹೆಜ್ಜೆಗಳು,ಡಾ. ಪಾದೇಕಲ್ಲು ವಿಷ್ಣು ಭಟ್ಟ ಮತ್ತು ರಾಮಗೋಪಾಲ ಕೆ.ಪಿ.,ಕನ್ಯಾನ (ಸಂ) ಡಾ.ಕೃಷ್ಣಮೂರ್ತಿ,ಪಂಜ ಸುಳ್ಯ-೨೦೦೪

೧೫. ಯಕ್ಷಗಾನ ಮಹಾಭಾರತ ಪ್ರಸಂಗಗಳು,ಡಾ.ಆನಂದ ರಾಮ ಉಪಾಧ್ಯ, ಕೃತಿ ಪ್ರಕಾಶನ ಬೆಂಗಳೂರು-೧೯೯೦

೧೬. ಯಕ್ಷಗಾನ ರಾಮಾಯಣ ಪ್ರಸಂಗಗಳು,ಡಾ.ಆನಂದ ರಾಮ ಉಪಾಧ್ಯ,ಕನ್ನಡ ಸಂಘ ಶೇಷಾದ್ರಿಪುರಂ ಕಾಲೇಜು ಬೆಂಗಳೂರು-೧೯೮೦

೧೭. ಯಕ್ಷರಸ ಚೇತನ, ವೆಂಕಟರಾಮ ಭಟ್ಟ ಸುಳ್ಯ,(ಸಂ) ಸುವರ್ಣ ಮಹೋತ್ಸವ ಮತ್ತು ಕೀರಿಕ್ಕಾಡು ಮಾಸ್ತರ್ ವಿಷ್ಣು ಭಟ್ಟ ಸಮಿತಿ, ದೇಲಂಪಾಡಿ- ೧೯೯೪

೧೮. ಯಕ್ಷಗಾನ ಸಾಹಿತ್ಯ, ಕೃಷ್ಣರಾವ್.ಕೆ.ಎಂ, ಮಿಂಚಿನಬಳ್ಳಿ,ಧಾರವಾಡ,೧೯೫೬

೧೯. ವಜ್ರಪತ್ರ, ಚಂದ್ರಶೇಖರ ಏತಡ್ಕ (ಸಂ),ಬನಾರಿ ಶ್ರೀ ಗೋಪಾಲಕೃಷ್ಣ ಯಕ್ಷಗಾನ ಕಲಾ ಸಂಘ ದೇಲಂಪಾಡಿ,೨೦೦೬

೨೦. ಸಮಗ್ರ ಯಕ್ಷಗಾನ ಪರಂಪರೆ ಮತ್ತು ಪ್ರಯೋಗ, ಹರಿದಾಸ ಭಟ್ಟ ಕು.ಶಿ. (ಸಂ),ರಾ.ಗೋ.ಪೈ.ಸಂಶೋಧನಾ ಕೇಂದ್ರ ಉಡುಪಿ.-೧೯೭೮

೨೧. ಸುವರ್ಣ ಕಲಶ,ಕೇಳು ಮಣಿಯಾಣಿ.ಎ. (ಸಂ),ವಿದ್ಯಾವಿನೋದಿನಿ ಐಡೆಡ್ ಕಿರಿಯ ಪ್ರಾಥಮಿಕ ಶಾಲೆ ಕೀರಿಕ್ಕಾಡು, ಕಾಸರಗೋಡು.-೧೯೭೮

೨೨. ಸ್ವಯಂಪ್ರಭಾ ಪರಿಣಯ,ಕೀರಿಕ್ಕಾಡು ಮಾಸ್ತರ್ ವಿಷ್ಣು ಭಟ್ಟ, ಬನಾರಿ ಶ್ರೀ ಗೋಪಾಲಕೃಷ್ಣ ಪ್ರಕಾಶನ ದೇಲಂಪಾಡಿ.ದ್ವಿತೀಯ ಮುದ್ರಣ,-೨೦೦೬

*********

# ಅನುಬಂಧ

ಕೀರಿಕ್ಕಾಡು ವಿಷ್ಣು ಮಾಸ್ತರರ ಹಸ್ತಾಕ್ಷರ

ಕೀರಿಕ್ಕಾಡು ವಿಷ್ಣು ಮಾಸ್ತರರ ಅಪರೂಪದ ಭಾವಚಿತ್ರಗಳು

# ಕೀರಿಕ್ಕಾಡು ವಿಷ್ಣು ಮಾಸ್ತರರ ಅಪರೂಪದ ಭಾವಚಿತ್ರಗಳು



ದಿ| ಕೀರಿಕ್ಕಾಡು ಮಾಸ್ತರ್ ವಿಷ್ಣು ಭಟ್ಟರು



ಗುರುಗಳಾದ ದಿ| ಕುದತ್ತೂ ಟಿ ನಾರಾಯಣ ಕೆದಿಲ್ಲಾಯರೊಂದಿಗೆ ದಿ| ಕೀರಿಕ್ಕಾಡು



ಸಂಘದ ವಾರ್ಷಿಕೋತ್ಸವದಲ್ಲಿ ಯಕ್ಷಗಾನ ಬಯಲಾಟ



'ಯಕ್ಷಯ ಜೀವನ' ದ ಬಿಡುಗಡೆ